ಜನಪ್ರಿಯ ಪುಸ್ತಕ ಮಾಲೆ

# ಗರತಿಯ ಹಾಡು

ಸಂಗ್ರಾಹಕರು:
ಹಲಸಂಗಿಯ ಚೆನ್ನಮಲ್ಲಪ್ಪ
ಲಿಂಗಪ್ಪ
ರೇವಪ್ಪ
ಮ.ತ। ಗೆಳೆಯರು



ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ

ಜನಪ್ರಿಯ ಸಾಹಿತ್ಯ ಮಾಲೆ

# ಗರತಿಯ ಹಾಡು

## (ತ್ರಿಪದೀ ಸಂಗ್ರಹ)

ಸಂಗ್ರಾಹಕರು :

ಹಲಸಂಗಿಯ ಚೆನ್ನಮಲ್ಲಪ್ಪ, ಲಿಂಗಪ್ಪ, ರೇವಪ್ಪ
ಮೊದಲಾದ ಗೆಳೆಯರು



ಕರ್ನಾಟಕ ಸರ್ಕಾರ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಬೆಂಗಳೂರು

GARATHIYA HAADU - A collection of folk songs collected by Halasangi Chennamallappa, Lingappa, Revappa and others and published by B. Parthasarathy, Director, Directorate of Kannada and Culture,
No. 14/3A, Nrupathunga Road, Bangalore-2.

Pages : IV+143



1990

ಬೆಲೆ : ರೂ. 8-50





ಮುದ್ರಣ :

**ರಜನಿ ಪ್ರಿಂಟರ್ಸ್**
ಪೇಟೆ ಮರಿಯಪ್ಪ ಕಾಂಪೌಂಡ್
ಅಂಬಾ ಮಹೇಶ್ವರಿ ಗುಡಿ ಹತ್ತಿರ
ಕಾಮಾಕ್ಷಿಪಾಳ್ಯ, ಬೆಂಗಳೂರು-೭೯.

# ಅರಿಕೆ

ಕನ್ನಡದಲ್ಲಿ ಪ್ರತಿವರ್ಷವೂ ಪ್ರಕಟವಾಗುತ್ತಿರುವ ಪುಸ್ತಕಗಳ ಸಂಖ್ಯೆಗೆ ಹೋಲಿಸಿದರೆ, ಅದಕ್ಕೆ ಅನುಗುಣವಾಗಿ ಅವುಗಳನ್ನು ಕೊಂಡು ಓದುವ ಸಹೃದಯರು ಸಾಕಷ್ಟಿಲ್ಲವೆಂಬ ಕೊರಗು ಕನ್ನಡ ಪುಸ್ತಕೋದ್ಯಮವನ್ನು ಯಾವತ್ತಿನಿಂದಲೂ ಕಾಡುತ್ತಿರುವ ಸಂಗತಿ. ಇತ್ತೀಚೆಗಂತೂ ದಿನದಿಂದ ದಿನಕ್ಕೆ ಏರುತ್ತಿರುವ ಕಾಗದದ ಬೆಲೆ ಹಾಗೂ ಮುದ್ರಣದ ವೆಚ್ಚಗಳಿಂದಾಗಿ ಪುಸ್ತಕಗಳ ಬೆಲೆಯೂ ಒಂದು ಹೊರೆಯಾಗಿ, ಎಂಥ ಪುಸ್ತಕಪ್ರೇಮಿಗಳೂ ಪುಸ್ತಕಗಳನ್ನು ಕೊಳ್ಳಲು ಹಿಂಜರಿಯುವಂಥ ಪರಿಸ್ಥಿತಿ ನಿರ್ಮಾಣವಾಗಿದೆ. ಈ ಹಿನ್ನೆಲೆಯಲ್ಲಿ ಒಳ್ಳೆಯ ಪುಸ್ತಕಗಳನ್ನು ಆಯ್ದು ಮುದ್ರಿಸಿ ಸಾಧ್ಯವಾದಷ್ಟು ಕಡಿಮೆ ಬೆಲೆಯಲ್ಲಿ ಪುಸ್ತಕಪ್ರೇಮಿಗಳಿಗೆ ತಲುಪಿಸುವ ವ್ಯವಸ್ಥೆಯೊಂದು ರೂಪುಗೊಳ್ಳುವುದಾದರೆ ಅದು ಖಂಡಿತವಾಗಿಯೂ ಕನ್ನಡ ಪುಸ್ತಕೋದ್ಯಮ ಹಾಗೂ ವಾಚನಾಭಿರುಚಿಯನ್ನು ಸಂವರ್ಧನಗೊಳಿಸುವ ದಿಕ್ಕಿನಲ್ಲಿ ಒಂದು ಮಹತ್ವದ ಪ್ರಯತ್ನವಾಗುತ್ತದೆ.

ವಾಸ್ತವದ ಸಂಗತಿ ಎಂದರೆ, ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು, ಈಗಾಗಲೇ ಹಲವು ಸಲ ಈ ಬಗೆಯ ಪ್ರಯತ್ನದಲ್ಲಿ ತೊಡಗಿ ಅದರ ಮೌಲಿಕತೆಯನ್ನು ಮನದಟ್ಟು ಮಾಡಿಕೊಂಡಿದೆ ಎನ್ನುವುದು. ಹಿಂದೆ ಕನ್ನಡ ಮತ್ತು ಸಂಸ್ಕೃತಿ ಪ್ರಸಾರ ಯೋಜನೆಯ ಅಂಗವಾಗಿ ಕುಮಾರವ್ಯಾಸ ಭಾರತ, ಜೈಮಿನಿ ಭಾರತ—ಮೊದಲಾದ ಶ್ರೇಷ್ಠ ಜನಪ್ರಿಯ ಕೃತಿಗಳು ಅತ್ಯಂತ ಕಡಿಮೆ ಬೆಲೆಯಲ್ಲಿ ಶ್ರೀಸಾಮಾನ್ಯರಿಗೆ ತಲುಪಿದವೆಂಬುದನ್ನು ನೆನೆಯಬಹುದು. ಅನಂತರ ವಿಶ್ವ ಕನ್ನಡ ಸಮ್ಮೇಳನದ ಅಂಗವಾಗಿ, ೧೯೮೫ರಲ್ಲಿ ಒಂದು ನೂರಾ ಹದಿನೇಳು ಪುಸ್ತಕಗಳನ್ನು, ೧೯೮೫ರಲ್ಲಿ ಐವತ್ತು ಪುಸ್ತಕಗಳನ್ನು ಮತ್ತು ಈಚೆಗೆ ಇನ್ನೂ ಮೌಲಿಕವಾದ ಹಲವು ಕೃತಿಗಳನ್ನು ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು ಸುಲಭ ಬೆಲೆಯಲ್ಲಿ ಜನಕ್ಕೆ ದೊರೆಯುವಂತೆ ಪ್ರಕಟಿಸಿದೆ. ಈ ಎಲ್ಲ ಸಂದರ್ಭಗಳಲ್ಲಿ ಈ ಪ್ರಕಟಣೆಗಳ ಬಗ್ಗೆ ಸಾರ್ವಜನಿಕರಿಂದ ದೊರೆತ ಪ್ರತಿಕ್ರಿಯೆ ಹಾಗೂ ಬೇಡಿಕೆಯ ಪರಿಣಾಮವಾಗಿ, ಇದೀಗ ಕರ್ನಾಟಕ ಸರ್ಕಾರವು ಪುಸ್ತಕೋದ್ಯಮವನ್ನು ಜನಪರವಾಗಿ ಮತ್ತು ದೃಢವಾಗಿ ಬೆಳೆಸುವ ಉದ್ದೇಶದಿಂದ 'ಕನ್ನಡ ಪುಸ್ತಕ ಪ್ರಾಧಿಕಾರ' ಎಂಬ ದೀರ್ಘಕಾಲಿಕ ಯೋಜನೆಯೊಂದನ್ನು ರೂಪಿಸಲು ಪರಿಶೀಲಿಸುತ್ತಿದೆ.

ಲೇಖಕ-ಪ್ರಕಾಶಕ-ಓದುಗರ ನಡುವೆ ಒಂದು ಬಗೆಯ ಗಾಢ ಸಂಬಂಧ ವನ್ನು ಏರ್ಪಡಿಸುತ್ತಾ, ಶ್ರೀಸಾಮಾನ್ಯರಲ್ಲಿ ವಾಚನಾಭಿರುಚಿಯನ್ನೂ, ಪುಸ್ತಕ ಪ್ರೀತಿಯನ್ನೂ ಎಚ್ಚರಗೊಳಿಸುತ್ತಾ, ರಾಜ್ಯಾದ್ಯಂತ ಓದುಗರಿಗೆ ಒಳ್ಳೆಯ ಪುಸ್ತಕಗಳು ಭಾರವಾಗದ ಬೆಲೆಯಲ್ಲಿ ದೊರೆಯುವಂಥ ಸ್ಥಾಯೀ ವ್ಯವಸ್ಥೆ ಯೊಂದನು ರೂಢಿಸುವುದು ಈ ಯೋಜನೆಯ ಗುರಿಯಾಗಿದೆ.

ಈ ಪ್ರಾಧಿಕಾರವು ಮೂಲತಃ ಒಂದು ಸ್ವಾಯತ್ತ ಮಂಡಳಿಯಂತೆ ಕಾರ್ಯನಿರ್ವಹಿಸಬೇಕಾಗಿದೆ. ಇದರ ಮೊದಲ ಹಂತಗಳಲ್ಲಿ ಸರ್ಕಾರವು ಆರ್ಥಿಕ ನೆರವನ್ನು ನೀಡುವುದು ಅಗತ್ಯವಾದರೂ, ಕ್ರಮಕ್ರಮೇಣ ಅದು ತನ್ನ ಸ್ವ ಸಾಮರ್ಥ್ಯ ಹಾಗೂ ಗಳಿಕೆಯ ಮೇಲೆ, ಕೇವಲ ವ್ಯಾಪಾರಬುದ್ಧಿಗೆ ಮೀರಿದ ನಿಲುವಿನಲ್ಲಿ ತನನು ತಾನು ಬೆಳೆಸಿಕೊಳ್ಳಬೇಕಾಗಿದೆ.

ಈ ಬಗೆಯ ಆಶಯಗಳಿಂದ, ಕರ್ನಾಟಕ ಸರ್ಕಾರದ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು 'ಜನಪ್ರಿಯ ಪುಸ್ತಕ ಮಾಲೆ' ಯ ಸರಣಿಯಲ್ಲಿ ಕನ್ನಡದ ಕೆಲವು ಒಳ್ಳೆಯ ಕೃತಿಗಳನ್ನು ಆಯ್ದು ಪುನರ್‌ಮುದ್ರಿಸಿ ಪ್ರಕಟಿಸುವ ಕಾರ್ಯವನ್ನು ಪ್ರಾರಂಭಿಸುತ್ತಿದೆ. ಈ ಸರಣಿಯಲ್ಲಿ ಸಾಹಿತ್ಯದ ವಿವಿಧ ಪ್ರಕಾರ ಗಳನ್ನು ಪ್ರತಿನಿಧಿಸುವ ಕೃತಿಗಳನ್ನು ಆಯ್ಕೆ ಸಮಿತಿಯ ಸೂಚನೆಯ ಮೇರೆಗೆ ಪ್ರಕಟಣೆಗೆ ತೆಗೆದುಕೊಳ್ಳಲಾಗಿದೆ. ಈ ಕೃತಿಗಳನು ಕನ್ನಡ ಓದುಗರು ವಿಶ್ವಾಸದಿಂದ ಒಪ್ಪಿಕೊಳ್ಳುತ್ತಾರೆಂದು ನಾವು ಭಾವಿಸಿದ್ದೇವೆ.

ಈ 'ಜನಪ್ರಿಯ ಪುಸ್ತಕ ಮಾಲೆ' ಯ ಆಯ್ಕೆ ಸಮಿತಿಯ ಸದಸ್ಯರಾದ ಡಾ॥ ಹಾ. ಮಾ. ನಾಯಕ, ಡಾ॥ ಜಿ. ಎಸ್. ಶಿವರುದ್ರಪ್ಪ, ಪ್ರೊ. ಕೀರ್ತಿನಾಥ ಕುರ್ತಕೋಟಿ, ಡಾ॥ ಗಿರಡ್ಡಿ ಗೋವಿಂದರಾಜ, ಶ್ರೀ ಪೂರ್ಣಚಂದ್ರ ತೇಜಸ್ವಿ, ಡಾ॥ ಚಂದ್ರಶೇಖರ ಕಂಬಾರ, ಡಾ॥ ರಾಜೀವ ತಾರಾನಾಥ ಮತ್ತು ಶ್ರೀ ಬರಗೂರು ರಾಮಚಂದ್ರಪ್ಪ ಅವರಿಗೆ, ಅನುಮತಿ ಕೊಟ್ಟ ಎಲ್ಲ ಲೇಖಕರಿಗೆ, ಈ ಪುಸ್ತಕಗಳನ್ನು ನಿಗದಿತ ಅವಧಿಯೊಳಗೆ ಮುದ್ರಿಸಿಕೊಟ್ಟ ಎಲ್ಲ ಮುದ್ರಕರಿಗೆ, ರಕ್ಷಾಪುಟದ ವಿನ್ಯಾಸವನ್ನು ರಚಿಸಿಕೊಟ್ಟ ಕಲಾವಿದ ಶ್ರೀ ಚಿ. ಸು. ಕೃಷ್ಣಶೆಟ್ಟಿ ಯವರಿಗೆ ಮತ್ತು ಈ ಯೋಜನೆಗೆ ಮುಕ್ತಮನಸ್ಸಿನಿಂದ ಮಂಜೂರಾತಿ ನೀಡಿದ ಕರ್ನಾಟಕ ಸರ್ಕಾರಕ್ಕೆ ನಾನು ಆಭಾರಿಯಾಗಿದ್ದೇನೆ.

೨೫-೫-೧೯೯೦ **ಬಿ. ಪಾರ್ಥಸಾರಥಿ**
ಬೆಂಗಳೂರು ನಿರ್ದೇಶಕರು

# ಪರಿವಿಡಿ

# ಪ್ರಕಾಶಕರ ಎರಡು ನುಡಿ

ಕನ್ನಡ ಸಾಹಿತ್ಯ ಪ್ರಪಂಚದ ಚರಿತ್ರೆಯಲ್ಲಿ 'ಗರತಿಯ ಹಾಡಿ'ನ ಪ್ರಕಾಶನವು ಚಿರಸ್ಮರಣೀಯವಾದ ಘಟನೆಯಾಗಿದೆ. 'ಸ್ತ್ರೀಣಾಂ ಅಶಿಕ್ಷಿತ ಪಟುತ್ವಂ' ಎಂಬ ಸಂಸ್ಕೃತ ಸೂಕ್ತಿಯ ಸತ್ಯತೆಯನ್ನು ಮನಗಾಣಬೇಕಾದರೆ 'ಗರತಿಯ ಹಾಡಿ'ನಲ್ಲಿ ಪ್ರಕಟವಾದ, ಕರ್ನಾಟಕದ ಗ್ರಾಮಾಂತರದ ಹೆಣ್ಣುಮಕ್ಕಳು ಬೀಸುವಾಗ, ತೊಟ್ಟಿಲು ತೂಗುವಾಗ, ಮನೆಗೆಲಸ ಮಾಡುವಾಗ ತಾವೇ ಕಟ್ಟಿ ಹಾಡಿದ ಈ ತ್ರಿಪದಿಗಳನ್ನು ಸಹೃದಯ ಸಾಹಿತ್ಯ ಭಕ್ತರು ಓದಲೇಬೇಕು. ಈ ಸಂಗ್ರಹವನ್ನು ಶ್ರೀ ದ. ರಾ. ಬೇಂದ್ರೆಯವರ ಸುತ್ತು ರಚಿತವಾದ ಗೆಳೆಯರ ಗುಂಪಿನವರಾದ ಹಲಸಂಗಿಯ (ದಿವಂಗತ) 'ಮಧುರಚೆನ್ನ', ಸಿಂಪಿ ಲಿಂಗಣ್ಣ, (ದಿವಂಗತ) ಕಾಪಸೆ ರೇವಪ್ಪ ಮೊದಲಾದ ಗೆಳೆಯರು ಕೂಡಿಸಿಕೊಟ್ಟರು. ಇದು ಪುಸ್ತಕ ರೂಪವಾಗಿ 'ಜಯ ಕರ್ನಾಟಕ ಗ್ರಂಥಮಾಲೆ'ಯಲ್ಲಿ, ೧೯೩೧ರ ಜೂನ್ ತಿಂಗಳಲ್ಲಿ ಅರಳಿತು. ಇದರ ಎರಡನೆಯ ಆವೃತ್ತಿಯನ್ನು ೧೯೩೭ರ ಜುಲೈ ತಿಂಗಳಲ್ಲಿ ಪ್ರಕಾಶಿಸುವ ಸುಯೋಗವು ನನಗೆ ಒದಗಿತು. ಇದು ತೀರಿಹೋಗಿ ೮-೧೦ ವರ್ಷಗಳಾಗಿ ಹೋದರೂ, ಮೂರನೆಯ ಆವೃತ್ತಿಯನ್ನು ಹೊರಡಿಸುವುದು ಇದುವರೆಗೆ ಸಾಧ್ಯವಾಗಲಿಲ್ಲ. ಆಗ ಹುಬ್ಬಳ್ಳಿಯ 'ಸಾಹಿತ್ಯ ಭಂಡಾರ'ದ ಶ್ರೀ ಮಂಗಳೂರು ಗೋವಿಂದರಾಯರು ಮುಂದೆ ಬಂದು, ಇದು ಕೈಗೂಡುವಂತೆ ಮಾಡಿದುದಕ್ಕಾಗಿ ಅವರಿಗೆ ಉಪಕೃತನಾಗಿದ್ದೇನೆ.

ಈ ಮೂರನೆಯ ಆವೃತ್ತಿಯು ೧೫೦ ಪುಟಗಳಷ್ಟಾಗಿದೆ. ನನ್ನ ಬಿನ್ನಹದ ಮೇರೆಗೆ ಗೆ॥ ಸಿಂಪಿ ಲಿಂಗಣ್ಣನವರು ತಮ್ಮ ಸಂಗ್ರಹದೊಳಗಿನ ಹಲವು ಹೊಸ ತ್ರಿಪದಿಗಳನ್ನು ಇದರಲ್ಲಿ ಸೇರಿಸಿದ್ದಾರಲ್ಲದೆ, ಈ 'ತ್ರಿಪದಾ ಗಾಯತ್ರೀ' ಸಾಹಿತ್ಯದ ಹೃದಯವನ್ನೇ ಬಿಚ್ಚಿ ತೋರಿಸುವಂತಹ ಬೆಲೆಯುಳ್ಳ 'ಅರಿಕೆ'ಯನ್ನು ಬರೆದುಕೊಟ್ಟು ಮಹೋಪಕಾರ ಮಾಡಿದ್ದಾರೆ. ಹಿರಿಯರಾದ ಬಿ. ಎಂ. ಶ್ರೀ., ಮಾಸ್ತಿ, ಬೇಂದ್ರೆಯವರ ಮುನ್ನುಡಿಗಳೊಂದಿಗೆ ಈ 'ಅರಿಕೆ'ಯನ್ನು ಓದಿಕೊಳ್ಳುವುದರಿಂದ, ಈ ವಿಶಿಷ್ಟ ಗ್ರಾಮೀಣ ಸಾಹಿತ್ಯದ ಅಭ್ಯಾಸಕ್ಕೆ ತುಂಬಾ ಅನುಕೂಲವಾಗುವುದೆಂಬುದನ್ನು ಸೂಚಿಸದಿರಲಾರೆನು.

ಆಗಸ್ಟ್ ೧೫, ೧೯೫೭
ಧಾರವಾಡ

ವಿನೀತ ರಾಮಚಂದ್ರರಾಯ

# ಪ್ರಸ್ತಾವನೆ

"ಪಂಡಿತರುಂ ವಿವಿಧ ಕಳಾ
ಮಂಡಿತರುಂ ಕೇಳತಕ್ಕ ಕೃತಿಯಂ ಕ್ಷಿತಿಯೊಳ್
ಕಂಡರ್ ಕೇಳ್ವೊಡೆ ಗೊರವರ
ದುಂಡುಚಿಯೇ ಬೀದಿವರೆಯೆ ಬೀರನ ಕತೆಯೇ?"

ಎಂದು ಮಧುರ ಕವಿ ಜನಪದಸಾಹಿತ್ಯವನ್ನು ಹಾಸ್ಯ ಮಾಡಿರುವನು. ಶಾಸ್ತ್ರಬಲದಿಂದಲೂ, ಸಂಸ್ಕೃತ ಪ್ರತಿಭೆಯಿಂದಲೂ ರಚಿತವಾದ ಪ್ರೌಢ ಸಾಹಿತ್ಯವೇ ಸಾಹಿತ್ಯವೆಂದೂ, ಹಳ್ಳಿಗಳಲ್ಲಿಯೂ, ಬೀದಿಗಳಲ್ಲಿಯೂ, ಮನೆಗಳಲ್ಲಿಯೂ ಜನಸಾಮಾನ್ಯರು ಹಾಡಿಕೊಳ್ಳುವ ಹಾಡುಗಳು ಸಾಹಿತ್ಯ ವಲ್ಲವೆಂದೂ ಇಂತಹ ಪಂಡಿತರ ಭಾವನೆ. ಈ ಅಭಿಪ್ರಾಯದ ಪ್ರಕಾರ ಆದಿಯಲ್ಲಿ ದೇವತಾಪ್ರೇರಣೆಯಿಂದ ಹುಟ್ಟಿದುದೇ ಕವಿತಾವಾಣಿ; ಅದು ಋಷಿಗಳಲ್ಲಿಯೂ ಮಹಾಕವಿಗಳಲ್ಲಿಯೂ ಕಾಣುವುದು. ಆ ಬಳಿಕ ಸರಸ್ವತೀ ಪ್ರಸಾದವಿಲ್ಲದ ಬರಿಯ ದುರಾಶೆಯ ದುಷ್ಕವಿಗಳಲ್ಲಿ ತಲೆ ದೋರುವುದು ಅದರ ಆಭಾಸ. ಕಟ್ಟಕಡೆಗೆ ಕಾಣಿಸಿಕೊಂಡು, ಜನಗಳು ಹಾಡಿ ನಲಿಯುತ್ತಿರುವ ಬಡಹಾಡಂತೂ ಕವಿತ್ವವೇ ಅಲ್ಲ.

ಈ ಅಭಿಪ್ರಾಯಕ್ಕೆ ವಿರೋಧವಾಗಿ ಕವಿತ್ವದ ಮೂಲವನ್ನೂ, ಆದಿಚರಿತ್ರೆಯನ್ನೂ ಪರಿಶೋಧಿಸಿರತಕ್ಕವರು ಹೇಳುವುದೇನೆಂದರೆ— ಮೊದಲು ಹುಟ್ಟಿದುದು ಜನವಾಣಿ. ಅದು ಬೆಳೆದು, ಪರಿಷ್ಕೃತವಾಗಿ ವೃದ್ಧಿಯಾದುದು ಕವಿವಾಣಿ. ಜನವಾಣಿ ಬೇರು : ಕವಿವಾಣಿ ಹೂವು. ಕಾಡುಜನರೂ, ಒಕ್ಕಲಿಗರೂ, ಹೆಂಗಸರೂ, ಮಕ್ಕಳೂ—ಶಾಸ್ತ್ರಕಾವ್ಯಗಳ ಪರಿಚಯವೇ ಇಲ್ಲದ ಜನಸಾಮಾನ್ಯರೆಲ್ಲರೂ ಹಾಡಿನ ಮಟ್ಟನ್ನು ಎಂದರೆ ಅಷ್ಟುಮಟ್ಟಿಗೆ ಛಂದಸ್ಸನ್ನು ಬಲ್ಲರು. ಹಿಂದಿನಿಂದ ಬಂದ ಹಾಡನ್ನು ತಲೆಮೊರೆಯಾಗಿ ಕಲಿತು ಹೇಳುವುದಲ್ಲದೆ, ಹೊಸ ಹಾಡನ್ನೂ ಕಟ್ಟ ಬಲ್ಲರು. ಆದಿಕಾಲದಲ್ಲಿ ಇನ್ನೂ ಕವಿತ್ವವೂ ಶಾಸ್ತ್ರವೂ ಶೈಶವದಶೆಯ ಲ್ಲಿದ್ದಾಗ, ಹಳ್ಳಿಯಲ್ಲಿ ಹೊಲದ ಕಣದಲ್ಲಿ, ಹಬ್ಬ—ಹುಣ್ಣಿಮೆಗಳಲ್ಲಿಯೂ

ಸುಖ-ದುಃಖದ ಸಂದರ್ಭಗಳಲ್ಲಿಯೂ ಜನರು ಸೇರಿ ತಮ್ಮ ರಸಭಾವ ಗಳನ್ನು ಹಾಡಿಕೊಂಡು ಕುಣಿಯುತ್ತಿದ್ದರು. ಕುಣಿತದ ಹೆಜ್ಜೆಗಳೇ ತಾಳ; ಹಾಡಿನ ಅಭಿನಯುವೇ ಕುಣಿತ. ಇದೇ ಜನರ "ಆಟಪಾಟ". ಕುಯಿಲು, ಕುಡಿತ, ಕೋಲಾಟ, ಬೇಟೆ, ಮದುವೆ, ಸಾವು, ಕಾಳಗದ ಸೋಲುಗೆಲವುಗಳು, ಬಾಳಿಕೆಯ ಕಷ್ಟಸುಖಗಳು, ವೀರರ ಸಾಹಸಕಾರ್ಯ ಗಳು, ದೈವಾನುಭವ, ದೈವಭಕ್ತಿ ಇವೇ ಮೊದಲಾದ ಎಲ್ಲರೂ ಬಲ್ಲ ವಿಷಯುಗಳನ್ನು ಕುಣಿಯುತ್ತಾ ಹಾಡು ಕಟ್ಟುತ್ತಿದ್ದರು. ಹೆಂಗಸರೂ, ಕೆಲಸಗಾರರೂ ಕೆಲಸದ ಬಳಲಿಕೆಯನ್ನು ಈ ಹಾಡಿನ ರಾಗದಲ್ಲಿ, ಈ ಗೀತದ ಆನಂದದಲ್ಲಿ ಮರಸುತ್ತಿದ್ದರು. ಕುಟ್ಟುವಾಗ, ಬೀಸುವಾಗ, ಮಗುವನ್ನು ತೂಗುವಾಗ, ಮದುವೆಗಾಗಿ ನಲಿಯುವಾಗ, ಸಾವಿಗಾಗಿ ಅಳುವಾಗ, ಭಾರವನ್ನೆತ್ತುವಾಗ, ಬಂಡಿಯನ್ನು ಹೊಡೆಯುವಾಗ, ದೋಣಿಯನ್ನು ನಡೆಸುವಾಗ, ಕಾಳಗದ ಸಾಧನೆಗಳನ್ನು ಅಭ್ಯಾಸ ಮಾಡುವಾಗ, ಹೆಂಗಸರೂ ಗಂಡಸರೂ ಈ ಹಾಡುಗಳನ್ನು ಹೇಳುತ್ತಿದ್ದರು; ಕಟ್ಟುತ್ತಿದ್ದರು. ಹೀಗೆ ನೃತ್ಯದ ಉಲ್ಲಾಸವನ್ನು ಪ್ರಕಾಶಗೊಳಿಸುತ್ತಾ ಉದ್ಯೋಗದ ಆಯಾಸವನ್ನು ಪರಿಹಾರ ಮಾಡುತ್ತಾ, ಆಗ್ಗ ಏಳುವ ಉಸಿರಿಗೆ ತಕ್ಕ ಹಾಗೆ ರಾಗವನ್ನು (ಛಂದಸ್ಸನ್ನು) ಹೊಂದಿಸುತ್ತಾ, ಜನರ ಸರ್ವಸಾಧಾರಣವಾದ ಮನೋಭಾವವನ್ನು ವಿಶದಗೊಳಿಸುತ್ತಾ ಹುಟ್ಟಿ ದುವು ಈ ಹಾಡುಗಳು; ಮತ್ತು ಈ ಹಾಡಿನ "ಪರಿ"ಗಳು.

ಪ್ರತಿಯೊಂದು ಭಾಷೆಯಲ್ಲಿಯೂ ಬಹು ಪುರಾತನ ಕಾಲದಿಂದಲೂ ಇಂತಹ ಹಾಡುಗಳು ಉಂಟು. ಇವುಗಳ ಸರಣಿಯನ್ನನುಸರಿಸಿ, ಯಾರೋ ಒಬ್ಬನು ತಾನೊಬ್ಬ ಕವಿ ಎಂಬ ಪೃಥಗ್ಭಾವವಿಲ್ಲದೆ ಜನಕ್ಕಾಗಿ ಜನರ ನಡುವೆ ಜನರ ಭಾವವನ್ನು ಹಾಡಿ, ಹಾಗೆ ದೇಶದಲ್ಲೆಲ್ಲಾ ಹಬ್ಬಿ ಕೊಂಡು, ತಲೆಯಿಂದ ತಲೆಗೆ ನಡೆದುಬರುತ್ತಾ, ಪುಸ್ತಕಕ್ಕೆ ಏರದೆ (ಆಗಿನ್ನೂ ಬರೆವಣಿಗೆಯಿಲ್ಲ), ಬಾಯುಪಾಠದಲ್ಲಿಯೇ ಕಾಲಕ್ಕೆ ತಕ್ಕಂತೆ ಮಾತುಗಳೂ ಭಾಷೆಯೂ ಸರಿಹೋಗುತ್ತಾ, ಛಂದಸ್ಸು ಮಾತ್ರ ರಾಗ ದಲ್ಲಿ ಉಳಿದು ಕೆಡದೆ ಈ ಹಾಡುಗಳು, ಈ "ಪಳಮೆ"ಗಳು, ಈ ಜನಪದ

ಸಾಹಿತ್ಯವು ಬದುಕಿ ಬಂದಿದೆ. ಇವುಗಳ ಛಂದಸ್ಸು ಬಹು ಸಹಜ, ಸರಳ; ಭಾಷೆಯೂ ಸಹಜ, ಸರಳ; ಆಡುವ ಮಾತು, ಹಾಡುವ ಮಟ್ಟು. ಆದರೂ ಜನಗಳ ಹೃದಯದಿಂದ ಸಂತೋಷದ ಅಥವಾ ದುಃಖದ ಸಮಯದಲ್ಲಿ ನೇರವಾಗಿ ಉಕ್ಕಿಬಂದ ಕಾರಣದಿಂದ ಇವುಗಳಲ್ಲಿ ಒಂದು ಸೊಗಸೂ, ಒಂದು ಕಾಂತಿಯೂ, ಒಂದು ರಮಣೀಯತೆಯೂ ಮೆರೆಯವುವು. ಮಕ್ಕಳ ತೊದಲು, ಇನಿಯಳ ಲಜ್ಜೆ, ತೆಂಗಾಳಿಯ ತೀಟ, ಮಲ್ಲಿಗೆಯ ಕಂಪು, ಬೆಳದಿಂಗಳ ತಂಪು - ಮುಂತಾದ ಉಪಮಾನಗಳು ಕೃತಕ ಕವಿತ್ವಕ್ಕಿಂತಲೂ ಈ ಹಾಡುಗಳಿಗೆ ಹೆಚ್ಚಾಗಿ ಒಪ್ಪುತ್ತವೆ.

ಈ ಹಾಡುಗಳು ಒಂದೊಂದು ಬಿಡಿ ಪದ್ಯಗಳಾಗಿ ಯಾವುದಾದರೂ ಒಂದು ಭಾವವನ್ನೋ ಸನ್ನಿವೇಶವನ್ನೋ ತಿಳಿಸುವುದೇ ಹೆಚ್ಚು. ಆದರೆ ಹಲವು ಪದ್ಯಗಳಲ್ಲಿ ಕಥೆ, ಭಾವವಿವರಣೆ, ಆಟವಾಟ, ಬೇಟೆಕಾಳಗಗಳ ವರ್ಣನೆ, ಒಗಟುಗಳ ಮೇಲಾಟ, ಕುಡಿತದ ಆರಾಟ ಮುಂತಾದುವನ್ನೂ ಹೇಳುವುದುಂಟು. ನಾಗರಿಕತೆಯ ಕಾಲದಲ್ಲಿ ಇತಿಹಾಸ ಪುರಾಣಗಳ ಸಾರವನ್ನು ಜನರ ಮುಟ್ಟಿಕ್ಕಿಳಿಸುವುದೂ, ಚರಿತ್ರೆಯಲ್ಲಿ ನಡೆದ ಮರೆಯಲಾಗದ ಸಂಗತಿಗಳನ್ನು ಜನರ ನೆನಪಿನಲ್ಲಿ ನಿಲ್ಲಿಸುವುದೂ, ಭಕ್ತಿ - ಜ್ಞಾನ-ವೈರಾಗ್ಯಗಳನ್ನು ಮನೆಮನೆಗೂ ಬೀರುವುದೂ ಈ ಜನಪದ ಸಾಹಿತ್ಯದ ಕೆಲಸ. ಜನರಿಂದ ಹುಟ್ಟಿ ಜನರಲ್ಲಿಯೇ ಪಳಗಿ, ಜನರ ಪ್ರೇಮವನ್ನು ಸೂರೆಗೊಂಡು, ಜನರ ಜೀವನದ ಸಾರವನ್ನೂ ಹೆಂಗಸರ ಮಧುರಕಂಠದ ಗಾನವನ್ನೂ ಸುರಿಸುವ ಈ ಸಾಹಿತ್ಯವನ್ನು ಒಣ ಕವಿಗಳೂ ಅಹಂಕಾರ ಮುಗ್ಧರಾದ ಪಂಡಿತರೂ ಅಲ್ಲಗಳೆಯಬಹುದೇ ಹೊರತು ನಿಸರ್ಗಕವಿಗಳೂ ರಸಜ್ಞರೂ ಜನತಾವತ್ಸಲರೂ ಎಂದಿಗೂ ತಿರಸ್ಕರಿಸಲಾರರು. ಒಂದು ವೇಳೆ ಋಷಿಮೂಲ ನದೀಮೂಲಗಳನ್ನು ಯಾವ ಶ್ರದ್ಧೆಯಿಂದ ಪೂಜಿಸುವರೋ ಅದೇ ಶ್ರದ್ಧೆಯಿಂದ ಈ ಸಾಹಿತ್ಯಪ್ರವಾಹ ಮೂಲವನ್ನು ಪೂಜ್ಯಭಾವದಿಂದ ಕಾಣುವರು.

ಜನಪದ ಸಾಹಿತ್ಯವನ್ನು ಮಾತ್ರ ಉಳ್ಳ ಒಂದು ಜನಕ್ಕೆ ಆ ಸಾಹಿತ್ಯದ ಮಟ್ಟವನ್ನು ಮೀರಿ ಉತ್ತಮ ಕಾವ್ಯಗಳಿಂದ ಶೋಭಿತವಾದ

ಸಾಹಿತ್ಯವನ್ನುಳ್ಳ ಜನರ ಸಂಪರ್ಕ ಉಂಟಾಗುವ ಸಂದರ್ಭ ಬಂದಾಗೆಲ್ಲಾ, ಆ ಅನ್ಯಸಾಹಿತ್ಯದ ಸೌಂದರ್ಯಕ್ಕೂ, ಗಾಂಭೀರ್ಯಕ್ಕೂ ಮರುಳಾಗಿ, ರಾಜಿಕ, ಸಾಮಯಿಕ ಕಾರಣಗಳಿಂದ ಆ ಸಾಹಿತ್ಯಕ್ಕೂ, ಸಾಹಿತ್ಯ ಶಾಸ್ತ್ರಕ್ಕೂ ಶರಣುಹೋಗಿ, ಅದರ ಕಾಂತಿಯನ್ನೂ, ಬಲವನ್ನೂ ಸ್ವೀಕರಿಸುವುದಕ್ಕೆ ಪ್ರಯತ್ನಿಸುವುದು ಸ್ವಾಭಾವಿಕವಾಗಿದೆ. ಹಿಂದೆ ಕನ್ನಡ-ಸಂಸ್ಕೃತದ ಸಮ್ಮೇಳನದಲ್ಲಿ ಹೀಗೆ ನಡೆಯಿತು. ಈಗ ಕನ್ನಡ—ಇಂಗ್ಲೀಷ್ ಸಾಹಚರ್ಯದಲ್ಲಿ ಹೀಗೆ ನಡೆಯುತ್ತಾ ಇದೆ. ಇದು ತಪ್ಪೆಂದಾಗಲಿ, ಕೆಳಗಿನ ಮಟ್ಟದ ಸಾಹಿತ್ಯವೇ ಉತ್ಕೃಷ್ಟವೆಂದಾಗಲಿ ಹೇಳಬೇಕೆಂದಲ್ಲ. ಆದರೆ ತನ್ನದನ್ನು 'ದೇಶ್ಯ'ವೆಂದು ಧಿಕ್ಕರಿಸಿ, ಅನ್ಯಮಾರ್ಗದಲ್ಲಿಯೇ ಸ್ವೇಚ್ಛೆಯಾಗಿ ಮದಿಸಿ ತಿರುಗುತ್ತಾ ಇದ್ದು, ಕಡೆಗೆ ನವೀನತೆಯ ಕುತೂಹಲವೂ ಸಾಮರ್ಥ್ಯವೂ ಕಾಲಕ್ರಮದಲ್ಲಿ ಹಳಸಿ, ಯಾವ ನಿಜವಾದ ಸತ್ತ್ವವೂ ಇಲ್ಲದೆ, ಜನರಿಂದ ದೂರವಾಗಿ ಸಾಹಿತ್ಯವು ನಿಸ್ಸಾರವಾಗುವುದು, ತೇಜೋಹೀನವಾಗುವುದು, ಸಣ್ಣ ಪಂಡಿತ ಸಂಸ್ಥೆಗಳಲ್ಲಿ ಮಾತ್ರ ಪೋಷಿತವಾಗುವುದು. ಆಗ ಮತ್ತೆ ಹಳೆಯ ಸಾಹಿತ್ಯದ ಪುನರುತ್ಥಾನವಾಗುವುದು. ಮತ್ತೆ ಸಹೃದಯರು ತವರುನಾಡಿನ, ತಾಯಿಹಾಡಿನ ಹಾಲನ್ನು ಕುಡಿದು ಸಜೀವರಾಗಬೇಕೆಂದು ಹಿಂತಿರುಗುವರು. ಜನರೊಡನೆ ಜನವಾಗುವರು. ಆ ಭಾಷೆ, ಆ ಛಂದಸ್ಸು, ಆ ಜೀವ ಮತ್ತೆ ಹೊಳಪುಗೂಡಿ ಹೆಮ್ಮೆಗೇರುವುದು. ಸಾಹಿತ್ಯದ ಏಳಿಗೆಯ ಕಾಲದಲ್ಲೆಲ್ಲಾ ಪ್ರಪಂಚದ ಎಲ್ಲಾ ಕಡೆಗಳಲ್ಲಿಯೂ ಹೀಗೆಯೇ ಆಗಿದೆ; ಆಗುತ್ತಿದೆ.

ಕನ್ನಡದಲ್ಲಿ ಇಂತಹ ಕಾಲ ಒದಗಿರುವಾಗ, ಕನ್ನಡ ಕವಿತೆ ತನ್ನ ಅಳತೆಯನ್ನೇ ಅಲ್ಲ, ಆಳವನ್ನೂ ಕೂಡಾ ಕಂಡುಕೊಳ್ಳುತ್ತಿರುವಾಗ, ಸಂಸ್ಕೃತ-ಇಂಗ್ಲೀಷ್ ಸಾಹಿತ್ಯಗಳ, ಇತರ ಸಾಹಿತ್ಯಗಳ, ಸರಿಯಾದ ಸಂಸ್ಕಾರದ ಜೊತೆಗೆ ಕನ್ನಡದ ಪ್ರೌಢಸಾಹಿತ್ಯದ ವ್ಯಾಸಂಗದ ಜೊತೆಗೆ, ಕನ್ನಡದ ಮತ್ತು ಇತರ ಸಾಹಿತ್ಯದ ಜನಪದ ಸಾಹಿತ್ಯವನ್ನೂ ಪರಾಮರ್ಶಿಸುವುದು ಅತ್ಯಾವಶ್ಯಕವಾದ ಕರ್ತವ್ಯ. ನವನಾಗರಿಕತೆಯ ಹೊಡೆತದಲ್ಲಿ, ಪ್ರೌಢಸಾಹಿತ್ಯದ ತಿರಸ್ಕಾರದಲ್ಲಿ ಈ ಜನಪದ ಸಾಹಿತ್ಯ

ಉಳಿಯುವುದೇ ಕಷ್ಟವಾಗಿದೆ. ನಾಶವಾಗುವುದಕ್ಕೆ ಮೊದಲೇ ಇದನ್ನು ಕಾಪಾಡಿಕೊಳ್ಳುವುದು ಕನ್ನಡಿಗರ ಕರ್ತವ್ಯ. ಸಾಹಿತ್ಯಾಭಿಮಾನಿಗಳೂ, ದೇಶವತ್ಸಲರೂ ಶ್ರದ್ಧೆಯಿಂದ ಮೂಲೆಮೂಲೆಗಳಿಂದಲೂ ತಮ್ಮ ತಮ್ಮ ಕಡೆಯಲ್ಲಿರುವ ಹಾಡುಗಳನ್ನು ಸಂಗ್ರಹಿಸುತ್ತಾ ಬಂದರೆ ಶೀಘ್ರದಲ್ಲಿಯೇ ಕನ್ನಡನಾಡಿನ ಹಾಡುಗಳೆಲ್ಲಾ ಒಂದುಗೂಡಿ ಒಂದು ದೊಡ್ಡ ಜನಪದ ಸಾಹಿತ್ಯಕೋಶವಾಗುವುದು. ಆಗ ಆ ಸಾಹಿತ್ಯವನ್ನೆಲ್ಲಾ ಅಮೂಲಾಗ್ರವಾಗಿ ಪರಿಶೋಧಿಸಿ, ಅದರ ಸ್ವರೂಪವನ್ನು ನಿರ್ಣಯಿಸಿ, ಇವುಗಳ "ಸತ್ಯ-ಸೌಂದರ್ಯ-ಸುಖ"ಗಳನ್ನು ಅನುಭವಿಸಿ, ಇವುಗಳ ವರ್ಚಸ್ಸು ಹೊಸ ಸಾಹಿತ್ಯದಲ್ಲಿ ಮೂಡುವಂತೆ ಮಾಡಬಹುದು. ಇವುಗಳ ಛಂದಸ್ಸನ್ನು ತಮಿಳು, ತೆಲಗು, ಕೊಡಗು, ತುಳು ಮುಂತಾದ ಭಾಷೆಗಳ ಮೂಲ ಛಂದಸ್ಸುಗಳೊಡನೆ ಹೋಲಿಸಿ, ದ್ರಾವಿಡ ಭಾಷೆಗಳ ಮೂಲ ಛಂದಸ್ಸಿನ ರಹಸ್ಯವನ್ನು ಅರಿಯಬಹುದು. ಆ ತಳಹದಿಯ ಮೇಲೆ ಹೊಸ ಛಂದಸ್ಸುಗಳನ್ನು ಕಲ್ಪಿಸುತ್ತಿರುವವರೂ ಈ ರಹಸ್ಯವನ್ನು ಅರಿತೇ ಕೆಲಸ ಮಾಡುತ್ತಿರುವರು.

ಈಗಾಗಲೇ ಎಷ್ಟೋ ಹಾಡುಗಳನ್ನು ಸಂಗ್ರಹಿಸಿ ಅವುಗಳ ಒಂದು ಭಾಗವನ್ನು "ಗರತಿಯ ಹಾಡು" ಎಂಬ ಹೆಸರಿನಲ್ಲಿ ಪ್ರಕಟಗೊಳಿಸುವ ಗೆಳೆಯರ ಗುಂಪಿನವರ ಉದ್ಯಮವು ಶ್ಲಾಘಿಸತಕ್ಕುದಾಗಿದೆ. ಈ ಜನಪದ ಸಾಹಿತ್ಯದ ವಿಷಯವಾಗಿ ಕನ್ನಡನಾಡಿನಲ್ಲೆಲ್ಲಾ ಉಪನ್ಯಾಸ ಮಾಡಿ, ಅದರ ಸ್ವಾರಸ್ಯವನ್ನೂ ಪ್ರತಿಭೆಯನ್ನೂ ವಿಶದಪಡಿಸಿ, ಈ ಗ್ರಂಥದ ಅತ್ಯುಜ್ವಲವಾದ ಮುನ್ನುಡಿಯಿಂದ ಅದರ ಮರ್ಮವನ್ನೆಲ್ಲಾ ಪ್ರಕಾಶಪಡಿಸಿ ಶ್ರೀಮಾನ್ ಬೇಂದ್ರೆಯವರು ಮಾಡಿದ ಉಪಕಾರಕ್ಕಂತೂ ಕನ್ನಡಿಗರು ಎಷ್ಟು ಕೃತಜ್ಞರಾಗಿದ್ದರೂ ತೀರದು.

—ಬಿ. ಎಂ. ಶ್ರೀಕಂಠಯ್ಯ

# ಪರಿಚಯ

ಸತ್ಯಕ್ಕೆ ಸಾವಿಲ್ಲವೆಂದು ನಾಣ್ಣುಡಿಯು ಹೇಳುವುದು. ಸತ್ಯದಂತೆಯೇ ಸೌಂದರ್ಯಕ್ಕಾದರೂ ಸಾವಿಲ್ಲ. ಸೌಂದರ್ಯವನ್ನು ಒಮ್ಮೆ ಕಂಡರಾಯಿತು. ಅವನ್ನು ಎಂದೂ ಮರೆಯಲಾಗುವದಿಲ್ಲ. ಸತ್ಯ ಸೌಂದರ್ಯಗಳಂತೆಯೇ ಸುಖವೂ ಸಾವಿಲ್ಲದುದು. ಸುಖವೇ ಅಮೃತವು. ಸುಖಾನುಭವವು ಒಂದು ಕ್ಷಣ ಮಾತ್ರವಾದಾಗ್ಗ್ಯೂ ಆ ಕ್ಷಣದಲ್ಲಿ ತಾನು ಮರ್ತ್ಯನೆಂಬುದನ್ನು ಮಾನವನು ಮರೆಯುವನು; ದೇವನಂತೆ ತನ್ನಲ್ಲಿಯೇ ಮೆರೆಯುವನು. ಸತ್ಯ-ಸೌಂದರ್ಯ-ಸುಖವು ಸಾಹಿತ್ಯದ ಪರಬ್ರಹ್ಮ. ಸಾಹಿತ್ಯವು ಅದರ ಸೃಷ್ಟಿ ಮಾತ್ರ. ಜೀವನವಾದರೂ ಸತ್ಯ-ಸೌಂದರ್ಯ-ಸುಖವನ್ನೇ ಭಜಿಸುವದು. ಜೀವನವು ಅರ್ಥಸೃಷ್ಟಿ; ಸಾಹಿತ್ಯವು ಶಬ್ದಸೃಷ್ಟಿ. ಜೀವನದ ಅರ್ಥವನ್ನು ಸಾಹಿತ್ಯವು ಶಬ್ದದಲ್ಲಿ ಮೂಡಿಸುವದು. ಈ ಶಬ್ದಗಳ ಹಿಂದೆ ಸತ್ಯ-ಸೌಂದರ್ಯ-ಸುಖವು-ಮಿಂಚಿ ಮಿಂಚಿ ಮಾಯವಾಗಿ ಎಲ್ಲ ಜೀವಗಳನ್ನು ದೃಶ್ಯದಿಂದ ಅದೃಶ್ಯದ ಕಡೆಗೆ ಸೆಳೆದೊಯ್ಯುವದು. ಈ ದೃಶ್ಯಾದೃಶ್ಯಗಳ ಮಧ್ಯದಲ್ಲಿಯೆ ಅಪಾರವಾದ ಸ್ನೇಹಸಾಗರವೊಂದು ಇರುವದಾಗಿ ಅನುಭವಕ್ಕೆ ಬರುವದು. ಇದೇ ಆ ರಸೋದಧಿಯು. ಈ ಕಡಲಿನಲ್ಲಿ ಎಲ್ಲ ಜೀವಗಳ ಹಡಗುಗಳು ಕತ್ತಲೆಯಿಂದ ಬೆಳಕಿಗೂ, ಮೃತ್ಯುವಿನಿಂದ ಅಮೃತಕ್ಕೂ, ದುಃಖದಿಂದ ಸುಖಕ್ಕೂ ಹೋಗಲೆಳಸುವವು.

ಸಾಹಿತ್ಯವಿಲ್ಲದ ಜೀವನವಿಲ್ಲ. ಜೀವನದ ತಿರುಳಿನಲ್ಲಿ ಕೀಳು ಮೇಲೆಂದಿಲ್ಲ. ಎಲ್ಲ ಜೀವನವೂ ಅದ್ಭುತವಾದ ರಸಾಯನವು. ಅದನ್ನು ಉಣ್ಣದಿದ್ದವರಿಲ್ಲ. ಶಬ್ದಮಾತ್ರವೆಲ್ಲ ಕಾವ್ಯವೆಂದೂ, ಜೀವಮಾತ್ರವೆಲ್ಲ ಕವಿಯೆಂದೂ ಒಬ್ಬ ಜ್ಞಾನಿಯು ಹೇಳಿದ್ದಾನೆ. ಆದರೆ ಜೀವನು ಆತ್ಮನಿದ್ದೂ ಅದರ ಅರಿವಿಲ್ಲದುದರಿಂದ ಪರಿವೆಯಿಲ್ಲದುದರಿಂದ ತೊಳಲಿ ಬಳಲುವಂತೆ, ಜೀವನವೊಂದು ಕಾವ್ಯ, ನಾಟಕ, ಎಂಬ ಅನುಭವವಿಲ್ಲದೆ ಸಂಸಾರವನ್ನು ಅಸಾರವತ್ತಾಗಿ ಕಾಣುತ್ತಲಿದ್ದಾನೆ. ಜನಪದ ಸಾಹಿತ್ಯದ

ಅಂತಃಸ್ಫೂರ್ತಿಯು ಈ ಶ್ರದ್ಧೆಯಲ್ಲಿದೆ. ಅದರ ದೃಷ್ಟಿಯಲ್ಲಿ ಜೀವನವೇ ಕಾವ್ಯ. ಆ ಜೀವನ ಈ ಜೀವನ ಎಂಬ ಭೇದವು ಅದಕ್ಕಿಲ್ಲ. ಅದಕ್ಕಾಗಿಯೆ ನಾಯಕ-ನಾಯಿಕೆಯರ ಮಹತ್ತ್ವವಾಗಲಿ, ಕಥಾವಸ್ತುವಿನ ಗುರುತ್ವವಾಗಲಿ ಅದಕ್ಕೆ ಬೇಕಾಗಿಲ್ಲ. ರಾಮ-ಕೃಷ್ಣರೇ ಬೇಕೆಂದಿಲ್ಲ; ರಾವಣ-ದುರ್ಯೋಧನರೇ ಅಗತ್ಯ ಎಂತಲ್ಲ; ಸೀತಾವನವಾಸ, ದ್ರೌಪದೀ ವಸ್ತ್ರಹರಣವು ಅವಶ್ಯವಾಗಿಲ್ಲ. ಎಲ್ಲ ಜೀವನವೇ ಎಲ್ಲಿ ಕಾವ್ಯವಾಗಿದೆಯೋ ಅಲ್ಲಿ ಗುರುಲಘುಗಳ ಭೇದವೇಕೆ ? ಈ ರಹಸ್ಯವನ್ನು ನಾವು ಜನಪದ ಸಾಹಿತ್ಯದಲ್ಲಿ ಕಾಣಬಹುದು.

ಜೀವನವೇ ದೇವತೆಯಾದ, ತ್ರಿಪದಿಛಂದದಲ್ಲಿ ಹೊರಹೊಮ್ಮಿದ 'ಗರತಿಯ ಹಾಡಿ'ನ ಋಷಿಗಳು ಹೆಣ್ಣು—ಮಕ್ಕಳು ನಮ್ಮ ತಾಯಿತಂಗಿಯರು, ಅಮ್ಮ ಅಕ್ಕಂದಿರು, ಮಡದಿ ಮಕ್ಕಳು. ಹಾಗೆ ವಿಚಾರಿಸಿ ನೋಡಿದರೆ ಅವರದೇ ನಿಜವಾದ ಕಾವ್ಯ. ಉಳಿದುದು ಕಾವ್ಯದ ಛಾಯೆ. ಕಾವ್ಯವು ಕಾಂತಾಸಮ್ಮಿತಿಯೆಂದು ಹೇಳುವರಷ್ಟೆ. ಕಾಂತೆಯರ ಮಾತಿನಂತಿರುವದೆ ಕಾವ್ಯವಾದರೆ ಕಾಂತೆಯರ ಮಾತೆ ಕಾವ್ಯದ ಮಾತೆಯಲ್ಲವೆ ? ನಾವು ಕಾವ್ಯ ಕಾವ್ಯ ಎಂದು ಕರೆಯುವದು ಅದರದೊಂದು ಸಂತಾನ, ಕಾಂತೆಯರ ಮಾತೆ ಕಾವ್ಯಮಾತೆ! ವೇದಕ್ಕೆ ಮಣಿಯದವರು, ಶಾಸ್ತ್ರಕ್ಕೆ ಬಗ್ಗದವರು, ಕಾಂತೆಯರ ಮಾತಿಗೆ ಮೆತ್ತಗೆ ಹಣ್ಣಾಗುವದನ್ನು ಕಂಡೇ ವೇದಶಾಸ್ತ್ರದ ತಿರುಳು ಕಾವ್ಯಮೋಹಿನಿಯ ಅವತಾರವನ್ನು ತಳೆದಿತು. ಇಲ್ಲಿ 'ಕಾಂತೆ'ಯೆಂಬ ಮಾತನ್ನು 'ಹೆಂಡತಿ' ಎಂಬ ಸಂಕುಚಿತಾರ್ಥದಲ್ಲಿ ತಿಳಿದುಕೊಳ್ಳದೆ ಸ್ತ್ರೀಜಾತಿಸಾಮಾನ್ಯವೆಂದೇ ತಿಳಿಯಬೇಕು.

ತೋಟಕ್ಕ ಹೋದಣ್ಣ ಊಟಕ್ಕ ಬರಲಿಲ್ಲ
ತೋಟದ ಹೂವ ತಲೆತುಂಬ । ಇಟಗೊಂಡು
ಊಟದ್ಹಂಬಲ ಮರೆತಾನ ॥

ಎಂದಾಗಲಿ

ಕೋಪವ್ಯಾಕಣ್ಣಯ್ಯ ಕೊಳ್ಳೊ ಕಾಲಿಗೆ ನೀರ
ಬಾಯಿ ತಂಬುಳವ ಉಗಳಣ್ಣ । ನೀ ಬರುವ
ದಾರೀಯ ನೋಡಿ ಬಡವಾದೆ ॥

ಎಂದಾಗಲಿ ತಂಗಿಯು ಅಣ್ಣನಿಗೆ ಹೇಳುವ ಮಾತಿನಲ್ಲಿಯೂ,

ಸರದಾರ ಬರುವಾಗ ಸುರಿದಾವ ಮಲ್ಲೀಗಿ
ದೊರೆ ನನ್ನ ತಮ್ಮ ಬರುವಾಗ । ಯಾಲಕ್ಕಿ
ಗೊನೆ ಬಾಗಿ ಹಾಲ ಸುರಿದಾವ ॥

ಎಂದು ಅಕ್ಕನು ತಮ್ಮನಿಗಾಗಿ ಹೇಳುವ ಮಾತಿನಲ್ಲಿಯೂ,

ತಾಯಿ ಕಾಣದ ಜೀವ ತಾವೂರಿ ಬಾವೂರಿ
ಭಾಳ ಬಿಸಲಾನ ಅವರೀಯ । ಹೂವ್ಹಾಂಗ
ಬಾಡತಿನಿ ತಾಯಿ ಕರೆದೊಯ್ಯ ॥

ಎಂದು ಮಗಳು ತಾಯಿಗೆ ಹೇಳುವ ಮಾತಿನಲ್ಲಿಯೂ,

ಅಚ್ಚಮಲ್ಲಿಗೆ ಹೂವ ಮುಚ್ಚಿ ಮಾರುವ ಜಾಣ
ನಾ ಕೊಳುವೆನಿದರ ಬೆಲೆ ಹೇಳೊ । ತಂಗೀಗಿ
ಸುರುಳಿಗೂದಲದ ಸುಗುಣೇಗಿ ॥

ಎಂದು ಅಕ್ಕನು ತಂಗಿಯ ನಲ್ಲನಿಗೆ ಹೇಳುವ ಮಾತಿನಲ್ಲಿಯೂ,

ಆಡಿ ಬಾ ಎನ ಕಂದ ಅಂಗಾಲ ತೊಳದೇನ
ತೆಂಗಿನಕಾಯಿ ಎಳನೀರ । ತಕ್ಕೊಂಡು
ಬಂಗಾರ ಮೋರೆ ತೊಳದೇನ ॥

ಬಾರೊ ಬಾರೋ ನನ್ನ ಬಾಲ ಚಕ್ರವರ್ತಿ
ನಾಲಿಗೆಯ ಮೇಲೆ ಸರಸೋತಿ । ಇರುವಂಥ
ಬಾಲಕ ಹಾಲ ಕುಡಿ ಬಾರೊ ॥

ಎಂದು ತಾಯಿ ಮಕ್ಕಳಿಗೆ ಹೇಳುವ ಮಾತಿನಲ್ಲಿಯೂ ಯಾವ ಕಾಂತಿಯಿಲ್ಲ? ಕಾಂತತೆಯಿಲ್ಲ? ನಿಜವಾಗಿಯೂ ಒಬ್ಬ ಆದಿಮಾಯೆಯೇ ತಾಯಿ ತಂಗಿ ಅಕ್ಕ ಹೆಂಡತಿ ಮಗಳಾಗಿ ಜೀವವನ್ನು ಆಡಿಸಲು ನಿಂತಂತೆ ಭಾಸವಾಗಿ ಬಿಡುವುದು. ಆ ಹೃದಯ, ಆ ದುಃಖಸಹಿಷ್ಣುತೆ, "ವಜ್ರ-ಕುಸುಮ" ಅಸಾಧಾರಣೋಕ್ತಿ, ಧ್ವನಿಪ್ರಾಣವಾದ ಸ್ವಭಾವಸರಲ, ವಸ್ತು ಸಹಜ ನಿವೇದನಪದ್ಧತಿ — ಒಂದೆರಡೇ — ಇವೆಲ್ಲ ಹೆಣ್ಣಿಗೆ ಹುಟ್ಟುಗುಣ-

ವಾಗಿವೆ. ಆದಕಾರಣ ವೇದಗಳು ದೇವನಿಃಶ್ವಸಿತಗಳಾದಂತೆ ಸ್ತ್ರೀಹೃದಯದ ನಿಃಶ್ವಸಿತವೇ ಕಾವ್ಯವೆಂದು ಹೇಳಬಹುದು. ಸರಸ್ವತಿಯಿಲ್ಲದ ಸ್ವಾರಸ್ಯವುಂಟೇ ?

೩

ಈ 'ಗರತಿಯ ಹಾಡಿ'ನಲ್ಲಿ ಬೀಸುವ ಕಲ್ಲಿನ ಪದಗಳೂ ಮಕ್ಕಳ ಲಾಲಿಗಳೂ ಇವೆ. ಮಕ್ಕಳು ಎಂದರೆ ಸಾಕು, ಹೆಣ್ಮಕ್ಕಳಿಗೆ ಬಲು ಮುದ್ದು. ನಮ್ಮ ಮಕ್ಕಳು ನಿಮ್ಮ ಮಕ್ಕಳು ಎಂಬ ಭೇದಭಾವನೆಗೆ ಅಲ್ಲಿ ಎಡೆಯಿಲ್ಲ. ವಿಷ್ಣುವಿನ ಲೋಕಪಾಲನಶಕ್ತಿಯೇ ಮೂರ್ತಿಗೊಂಡು ಬಂದವಳಲ್ಲವೇ ಹೆಂಗುಸು ? ತಾಯ ಮೊಲೆಯೆ ಕ್ಷೀರಸಾಗರದ ನೆಲೆಯಲ್ಲವೇ ? ಅವಳಿಗೆ ಮಕ್ಕಳ ಆಟನೋಟ, ಮಾತುಕಥೆ, ನಗೆನಡೆ ಎಂದರೆ ಹಿರಿಹಿಗ್ಗು ; ತೀರ ಹುಚ್ಚು. ಮಕ್ಕಳಿಗಾಗಿ ಹಾಡುವಾಗ ಮಕ್ಕಳಿಗೆ ಆ ಹಾಡಿನ ಮಾತು ತಿಳಿಯಲಿ ಬಿಡಲಿ, ಸಾಮಾನ್ಯವಾಗಿ ತಾಯಿಯು ತನ್ನ ದುಃಖವನ್ನು ನುಂಗಿ ತನ್ನ ಸುಖವನ್ನೇ ನೆನೆಸಿ ಹಾಡುವಳು. ಯಾಕೆಂದರೆ ತಾಯಿಯ ಧ್ವನಿಯಿಂದಲೇ, ಅವಳ ಮುಖಮುದ್ರೆ ದೃಷ್ಟಿಗಳಿಂದಲೇ ಕೂಸು ಹಾಡಿನ ಹುರುಳನ್ನು ಹೀರಿಕೊಳ್ಳುವದು. ಆದರೂ ತಿಳಿದೋ ತಿಳಿಯದೆಯೋ ಒಮ್ಮೊಮ್ಮೆ ತನ್ನ ದುಃಖವನ್ನೂ ಕೂಡಾ ತಾಯಿಯು, ಕೂಸಿನಿಂದ ಸಮಾಧಾನವನ್ನಪೇಕ್ಷಿಸಿಯೋ ಏನೋ, ತೋಡಿಕೊಳ್ಳುವದುಂಟು. ಕೂಸಿಗೆ ಸಮಾಧಾನವನ್ನೀಯಲೂ, ಅದನ್ನು ಹಾಡಿಹರಿಸಲೂ, ಅದನ್ನು ಕಂಡು ನಲಿದುಲಿಯಲೂ ಲಾಲಿಗಳ ಜನ್ಮವಾಗಿದೆ. ಆದರೆ ಬೀಸುವ ಕಲ್ಲಿನ ಪದಗಳಲ್ಲಿ ಹೆಣ್ಣಿನ ದುಃಖವು ಹಿಡಿಸಲಾರದೆ ಹೊರಬೀಳುವದು. ಅತ್ತೆ ಮನೆಯ ಸೊಸೆಗೆ ಬೀಸುವ ಕಲ್ಲಿನ ಬಳಿಯೇ ತವರುಮನೆ; ಅದರ ಗರ್ಗರ ಸಪ್ಪಳವೇ ಏಕಾಂತ. ಶೋಕಕ್ಷೋಭಗಳಿಂದ ಎದೆಯನ್ನು ಅತ್ತು ಹಾಡಿ ಹಗುರಾಗಿ ಮಾಡಿಕೊಳ್ಳಲು ಅವರಿಗ ಬೇರೆ ಎಡೆಯೆಲ್ಲಿ ? ಬೇರೆ ಸಮಯವಾದರೂ ದೊರೆಯುವದೇ ? ಈ ಬೀಸುವ ವೇಳೆಯನ್ನು ಗಾ। ಬೆಟಗೇರಿ ಕೃಷ್ಣಶರ್ಮರವರು ತಮ್ಮ 'ಹಳ್ಳಿಗರ ಹಾಡುಗಳು' ಎಂಬ ನಿಬಂಧದಲ್ಲಿ ಹೀಗೆ ಬಣ್ಣಿಸಿದ್ದಾರೆ:

"ಬೀಸುವ ವೇಳೆಯೆಂದರೆ ಸಾಮಾನ್ಯವಾಗಿ ರಾತ್ರಿಯ ಕೊನೆಯ ಜಾವದ ಸಮಯ. ಆಗ ಎಲ್ಲೆಲ್ಲಿಯೂ ಶಾಂತತೆಯ ಸಾಮ್ರಾಜ್ಯವು ನೆಲೆಗೊಂಡಿರುವುದು; ಎಲ್ಲ ಪ್ರಾಣಿಗಳಿಗೂ ಸಕ್ಕರೆನಿದ್ರೆಯ ಕಾಲ ವದು. ಆಗಲೇ, ಹಳ್ಳಿಯ ಹೆಂಗಸರು ಎದ್ದು ಬೀಸುವುದಕ್ಕೆ ಮೊದಲು ಮಾಡುವರು. ಸೃಷ್ಟಿಯು ತನ್ನ ನೈಸರ್ಗಿಕ ಸಂಗೀತಮಯ ವಾತಾ ವರಣದಿಂದ ಮೊದಲೇ ಕೂಡಿಕೊಂಡಿರುವುದು. ಅವರಲ್ಲಿಯೇ ಬೀಸುವ ಕಲ್ಲು ಎಡಬಿಡದೆ ಮಂದ್ರ ಷಡ್ಜದಲ್ಲಿ ಸ್ವರವನ್ನು ಹಿಡಿದು ನಡೆದಿರು ವುದು. 'ನಾಗರಹೆಡೆಯಂತೆ ನಲಿನಲಿದು ಬೀಸುವ' ನಾರಿಯರು ಆ ಸ್ವರದಲ್ಲಿ ಸ್ವರವನ್ನು ಬೆರೆಯಿಸಿ, ಕೈ ಬಳೆಗಳ 'ಗಲಕು ಗಲಕು' ಎಂಬ ಸಪ್ಪಳವೇ ತಾಳಗಳನ್ನು ಹಾಕುತ್ತಿರಲು, ವೀಣೆ, ಕೊಳಲು ಗಳನ್ನು ಮೂದಲಿಸುವ ಮಂಜುಲ ಕಂಠದಿಂದ ಚೆಲುವು ಒಲವುಗಳನ್ನು ಬಣ್ಣಿಸಿ ಹಾಡುತ್ತಿರುವರು. ಅಂತಹ ಸಂಗೀತ ಸಂಯೋಗವು ಅದಾರ ಮನವನ್ನು ಸೆಳೆದುಕೊಳ್ಳದಿರುವುದು? ಅಳುತಿರುವ ಎಳೆಯ ಹಸುಳೆ ಗಳು ಆ ಸಂಗೀತವನ್ನು ಕೇಳಿ ಅಳುವುದನ್ನು ನಿಲ್ಲಿಸಿ ಸಮಾಧಾನಗೊಂಡು ನಿದ್ದೆ ಹೋಗುವುವು. ಅರೆನಿದ್ದೆಯಲ್ಲಿರುವವರು ಆ ಸಂಗೀತದಿಂದ ಸೂಸುತ್ತಿರುವ ಸಂತೋಷತರಂಗದಲ್ಲಿ ಓಲಾಡಿ ಓಲಾಡಿ ಮೈಮರೆ ಯುತ್ತಲಿರುವರು. ಮನಸ್ಸಿನ ದುಗುಡವನ್ನು ಹೊಡೆದೋಡಿಸಿ ಅದನ್ನು ಪ್ರಸನ್ನತೆಯ ಕಡೆಗೆ ತಿರುಗಿಸುವುದಾ ಮೋಹಿನೀ ಮಂತ್ರವು. ಇಂತಹ ಸಂತೋಷವನ್ನು ನಿತ್ಯನಿತ್ಯವೂ ಅನುಭವಿಸುತ್ತಿರುವವರೆಂತಹ ಪುಣ್ಯ ಶಾಲಿಗಳೋ! ಜೀವಿತಕಾಲದಲ್ಲಿ ಒಮ್ಮೆಯಾದರೂ ನಾವದನ್ನು ಅನುಭವ ಸಿಯೇ ತೀರಬೇಕು".

೪

ಜನಪದ ಸಾಹಿತ್ಯಕ್ಕೆ 'ವರ್ಣಕ', 'ಬಣ್ಣವಾಡು', 'ಹಾಡುಗಬ್ಬ' ವೆಂದು ಹಳೆಯ ಹೆಸರುಗಳಿರುವವು; 'ವರ್ಣಕಕ್ಕಿಲ್ಲ ಲಕ್ಷಣಂ' ಎಂದು ಪುಸ್ತಕ ಕವಿಗಳು ಅದರ ದುರ್ಲಕ್ಷಣವನ್ನು ಹೇಳುತ್ತಿದ್ದರು. ವರ್ಣಕ ಕಾವ್ಯವನ್ನು ಲಕ್ಷಣಾನ್ವಿತವಾಗಿ ಮಾಡಲೆತ್ನಿಸಿದ ಪ್ರೌಢಕವಿಗಳೂ ಆಗಿ ಹೋದರು. ಲಕ್ಷಣಗಳೆಲ್ಲ ಇದ್ದು ಜೀವವಷ್ಟೆ ಇಲ್ಲದಿದ್ದರೆ ಕಾವ್ಯದ

ಬಡನೆಕಾಯಿಯಾಗುವದೆಂದು ಹೇಳುವ ಅಘಟ ಕವಿಗಳಾಗಿ ಹೋದರು ; ವರ್ಣಕಕ್ಕೆ ಮಾನ್ಯತೆಯನ್ನು ಕಲ್ಪಿಸಿ 'ರಗಳೆಯ ಕವಿ' ಎಂದೆನಿಸಿಕೊಂಡ ವರೂ ಆಗಿಹೋದರು. ಇಂದು ವರ್ಣಕ ಕಾವ್ಯವು ಮತ್ತೆ ತಲೆದೋರಲಿದೆ, ಮೈದೋರಲಿದೆ.

ವಸ್ತುಕದ ರೀತಿ ರಾಜಮಾರ್ಗ, ವರ್ಣಕದ ರೀತಿ ಹಳ್ಳಿಯ ಹಾದಿ. ಮೊದಲನೆಯದು ಸಂಸ್ಕೃತ, ಎರಡನೆಯದು ದ್ರಾವಿಡ ; ಒಂದು ನಾಗರ, ಇನ್ನೊಂದು ಜಾನಪದ. ಜನಪದದ ಏಳಿಗೆಯಾಗಬೇಕೆಂಬ ಕಾಲದಲ್ಲೆಲ್ಲ ವರ್ಣಕ ಸಾಹಿತ್ಯಕ್ಕೆ ಉಕ್ಕು ಹೆಚ್ಚು. ಷಟ್ಪದಿ ಸಾಂಗತ್ಯಗಳೂ, ಶರಣರ ವಚನ, ದಾಸರ ಪದಗಳೂ ಆ ಬುದ್ಧಿಯಿಂದ ಹುಟ್ಟಿದವುಗಳು. ವರ್ಣಕ ಸಾಹಿತ್ಯಕ್ಕೆ ತ್ರಿಪದಿಯೇ ಮಾತೃಸ್ಥಾನವಲ್ಲಿದೆ ಎಂಬುದಕ್ಕೆ, ತ್ರಿಪದಿಯೆ ಎಲ್ಲಕ್ಕೂ ಹಳೆಯ ಕನ್ನಡದ ವೃತ್ತವೆಂಬುದು ಶಾಸನಪದ್ಯಮಂಜರಿ ಯೊಳಗಿನ 'ಸಾಧುಗೆ ಸಾಧು' ಎಂದು ಮೊದಲಾಗುವ ಕಪ್ಪೆಯರ ಭಟ್ಟನ ಸ್ತುತಿಯುಳ್ಳ ತ್ರಿಪದಿಯಿಂದ ಕಂಡುಬರುವದಂತಿರಲಿ ; ಜನಪದ ಸಮ್ಮತಿಯ ಪಟ್ಟವನ್ನು ಪಡೆದ ಒನಕೆವಾಡುಗಳು ತ್ರಿಪದಿಯಲ್ಲಿರುತ್ತಿದ್ದ ವೆಂದು 'ಸೂಳೆ ಸಿದ್ಧಾಂತಮಂ ಒನಕೆವಾಡಂ ಮಾಡಿ ಪಾಡುವ ಪೆಂಡಿರ' ತ್ರಿಪದಿಗಳನ್ನು ಬರೆದ ನೇಮಿಚಂದ್ರನ ಲೀಲಾವತಿಯೊಳಗಿನ ಮಾತಂ ತಿರಲಿ ; ವಸ್ತುಕ ಮಾರ್ಗವನ್ನು ಮತ್ತೆ ಎತ್ತಿ ಹಿಡಿದವನಾಗಿಯೂ ವರ್ಣಕದ ಮರ್ಮವನ್ನು ಬಲ್ಲ ತಿರುಮಲಾರ್ಯನ, 'ಡೊಂಬಿಯ ತಂಬ ಟೆಗರ ಪಾಡುವ ತಿಪದಿಯನಿರ್ಮಡಿಸಿ ಷಟ್ಪತಿಯಾದುದು' 'ಸುವ್ವಿಯ ತಿಪದಿಗಳು' ಎಂಬ ಮಾತೂ ಸಿದ್ಧಪಡಿಸುವದು. ಸಾಂಗತ್ಯವಾದರೂ ಈ ಮುಕ್ಕಾಲ್ವಾಡುಗಳು (ತ್ರಿಪದಿ) ಚೌಕಂಗೊಂಡಾದುವೆಂಬುದನ್ನೂ ಅವನು ಸೂಚಿಸದೆ ಇಲ್ಲ. ಷಟ್ಪದಿ ಸಾಂಗತ್ಯಗಳು ತ್ರಿಪದಿಯ ವಿಸ್ತಾರಗಳು. ತ್ರಿಪದಿಯೇ ಕನ್ನಡವೃತ್ತಗಳ ಗಾಯತ್ರಿ. ಅವಳೇ ಇನ್ನೂ ನಮ್ಮ ಮಕ್ಕ ಳನ್ನು ಹಾಡಿ ಹರಸುತ್ತಿರುವಳು. ಮರಾಠಿ 'ಓವಿ' ವೃತ್ತಕ್ಕೂ ತ್ರಿಪ ದಿಯೇ ಮೂಲವೇನೋ ಎಂಬಂತೆ ಕಾಣುವುದು. ಅದೇನೇ ಇರಲಿ, ಸೂಳೆಯರು ಗರತಿಯರು ಡೊಂಬರು ಜಂಗಮರು ಎಲ್ಲರೂ ತ್ರಿಪದಿಯಲ್ಲಿ ತಮ್ಮ ಜೀವರಸವನ್ನು ಎರಕಹೊಯ್ದರೆಂಬುದಕ್ಕೆ ಏನೂ ಸಂದೇಹವಿಲ್ಲ.

ಮಾರ್ಗವೊಡಂಬಡುವಂತೆ ದೇಶಿಯನ್ನು ಸೇರಿಸಿಕೊಳ್ಳುತ್ತಿದ್ದ ವಸ್ತುಕ ಕವಿಗಳ ಮಾರ್ಗವಂತಿರಲಿ; ವರ್ಣಕ ಸಾಹಿತ್ಯವನ್ನು ಚೆನ್ನಾಗಿ ನುರಿಸಿಕೊಂಡ ಸರ್ವಜ್ಞ, ರತ್ನಾಕರ, ವಚನಕಾರರ ಕೃತಿಗಳು ಬಣ್ಣವಾಡುಗಳ ಬೆಳದಿಂಗಳನ್ನು ಬೀರಿ ವರ್ಣಕದ ಮೇಲ್ಮೆಯನ್ನು ತೋರಿಸಿವೆ. 'ರಗಳೆ' 'ಬೀರನ ಕತೆ' ಎಂದು ಅವುಗಳನ್ನು ಹೀಯಾಳಿಸಿದರೇನು ? ಬಣ್ಣವಾಡುಗಳ ಸಹಜ ಸೌಭಾಗ್ಯಕ್ಕೆ ಕುಂದುಂಟೆ ?

೫

'ಗರತಿಯ ಹಾಡಿ'ನ ತ್ರಿಪದಿಗಳಲ್ಲಿ ಕಂಡುಬರುವ ಕೆಲವು ವೈಲಕ್ಷಣ್ಯಗಳನ್ನು ಕುರಿತು ಒಂದೆರಡು ಮಾತುಗಳನ್ನು ಬರೆಯುವದುಚಿತವಾಗಿದೆ. ಈ ಹಾಡುಗಳಲ್ಲಿ ಪಾಠಾಂತರಗಳಿಗೆ ಎಣೆಯಿಲ್ಲ. ಬಾಯಿಗೆ ಸಿಕ್ಕ ಬೆಣ್ಣೆಯ ಮುದ್ದೆಯನ್ನು ಬೇಕುಬೇಕಾದಂತೆ ಮಿದ್ದುವ ಹಾಗೆ ಹೆಂಗಳೆಯರು ಇವುಗಳನ್ನು ಹಾಡು ಹಾಡುವಾಗಲೆ ತಿದ್ದುವರು. ಆದ ಕಾರಣ ಇವುಗಳ ಕನ್ನಡ ತಿರುಳಿನಲ್ಲಿ ಕೆಲವು ಸಕ್ಕದದ ಹರಳುಗಳು ಕಂಡುಬರುವವು. ಆದರೆ ಆ ಸಂಸ್ಕೃತ ಪದಗಳನ್ನು ಆಯ್ದುಕೊಳ್ಳುವದರಲ್ಲಿಯೂ ಎಂಥ ನೈಸರ್ಗಿಕವಾದ ರಸಿಕತೆ, ಜಾಣ್ಮೆ, ನೈಪುಣ್ಯ ! ನುಡಿಯಲ್ಲಿ ಹೀಗೆ ಬೆರಕೆ ಕಂಡುಬಂದರೂ, ವಾಕ್ಯರಚನೆಯಲ್ಲಿ ಕನ್ನಡವು ಅಚ್ಚಳಿಯದೆ ಇದೆ. ಕನ್ನಡವು ಎದೆಯ ಬಗೆಗಳನ್ನೆಲ್ಲ ಕನ್ನಡಿಸುವದೆಂಬುದನ್ನು ಈ ಹಾಡುಗಳಲ್ಲಿ ಕಂಡುಕೊಳ್ಳಬೇಕು. ಪ್ರಸಾದವು ಈ ಹಾಡುಗಳ ಹುಟ್ಟುಗುಣವಾಗಿದೆ. ಆದರೂ ಒಂದು ಬಗೆಯ ಗಾಂಭೀರ್ಯವು ತಾನೆತಾನಾಗಿ ಅದರ ಜೊತೆಯಲ್ಲಿಯೆ ಸೇರಿಕೊಂಡು ಬರುವದನ್ನು ಪ್ರತಿಪದ್ಯಗಳಲ್ಲಿಯೂ ಕಾಣಬಹುದು. ಇನ್ನು ಯತಿವಿಲಂಘನದಿಂದ ಕನ್ನಡವು ಅರಿದಾದುದು ಸಂಸ್ಕೃತ ವೃತ್ತಗಳ ಕಾಡನ್ನು ಸೇರಿಕೊಂಡಾಗ ಮಾತ್ರ. ಷಟ್ಪದಿಕಾರರೂ ಅದೇ ಹಾದಿಯಿಂದ ಹೋದರೂ 'ವರಯತಿಗೆ ಭಂಗಮಂ ತಾರದೆ' ಹಾಡುವ ಎಚ್ಚರವಿದೆ ಅವರಿಗೆ. ತ್ರಿಪದಿಯಲ್ಲಿಯೋ ಯತಿಗೆ ಏಕಚಕ್ರಾಧಿಪತ್ಯವಿದೆ. ಆದಕಾರಣವೇ ಸರ್ವಜ್ಞನ ತ್ರಿಪದಿಗಳು ಯತಿಯ ಜತೆಯಲ್ಲಿವೆ. ವಸ್ತುಕ ಕಾವ್ಯಗಳೊಳಗಿನ ತ್ರಿಪದಿಗಳು ಅದರ ಬೇರೆ ವೃತ್ತಬಂಧುಗಳಂತಿವೆ. ಇನ್ನು ಯಮಕ

ಪ್ರಾಸ ವಿಚಾರ. ನೃಪತುಂಗನು ಹೇಳುವ ವಿವಿಧ ಪ್ರಾಸಗಳನ್ನು ಪೂರ್ಣವಾಗಿ ಕಾಣಬೇಕಾದರೆ ಜನಪದ ಸಾಹಿತ್ಯಕ್ಕೆಯೆ ಶರಣುಬರಬೇಕು. ಆ ಪ್ರಾಸಗಳಲ್ಲದೆ ಗಾದೆಗಳಲ್ಲಿ ಕಂಡುಬರುವ ಪ್ರಥಮಾಕ್ಷರ ಪ್ರಾಸವೂ, ಸಸ್ವರ ಸನಾದ ಪ್ರಾಸಗಳೂ, ಮಾತುಗಳ ಸಮತೂಕದ ಪ್ರಾಸವೂ ಈ ಸಾಹಿತ್ಯದ ವಿಶೇಷ ಲಕ್ಷಣವಾಗಿದೆ. ಸಹಜರೂಪ ಸುಭಗವಾಗಿಯೂ, ಸ್ವಭಾವೋಕ್ತಿ ಪ್ರಾಣವಾಗಿಯೂ, ನಿರಲಂಕಾರ ಸುಂದರವಾಗಿಯೂ, ಅಲಂಕಾರವನ್ನು ತೋರಗೊಡದಂತೆ ಅಲಂಕೃತವಾಗಿಯೂ ಇರುವ ಈ ಪದ್ಯಗಳ ಅಲಂಕಾರವಿಷಯವಾಗಿ ಹೆಚ್ಚು ಹೇಳಬೇಕಾಗಿಲ್ಲ. ಇದರ ಕೆಲವು ಲಕ್ಷಣಗಳನ್ನು ಮಿ. ಚೆನ್ನಪ್ಪ ಉತ್ತಂಗಿಯವರ 'ಸರ್ವಜ್ಞ ಕವಿತಾ ಸಂಗ್ರಹ'ದ ಪ್ರಸ್ತಾವನೆಯಲ್ಲಿ ಕಂಡುಕೊಳ್ಳಬೇಕು.

೬

ಈ ಸಂಗ್ರಹವನ್ನು ಪ್ರಕಟಿಸುವಲ್ಲಿ ಏನಾದರೂ ಅಪೇಕ್ಷೆಯಿದೆಯೋ ಎಂದು ಯಾರಾದರೂ ಕೇಳಬಹುದು. ನನ್ನ ಗೆಳೆಯರೂ ನಾನೂ ಇವುಗಳನ್ನೋದಿಕೊಂಡಾಗ್ಗೆ ನಮಗಾದ ಆನಂದವನ್ನು ಬೇರೆಯವರೂ ಪಡೆಯಲೆಂಬುದೇ ಮೂಲ ಅಪೇಕ್ಷೆಯೆಂದು ನಾನಿಲ್ಲಿ ಹೇಳಬಹುದು. ಆದರೆ ಈ ಆನಂದದ ಹೊರತಾಗಿ ಬೇರೆ ಪ್ರಯೋಜನವೂ ಇದಕ್ಕುಂಟು.

ಬೀದರ ಹೈದ್ರಾಬಾದುಗಳ ಉತ್ತರದ ತುದಿಯಿಂದ ನೀಲಗಿರಿ ಕೊಯಿಮುತ್ತೂರಿನ ದಕ್ಷಿಣದ ತುದಿಯವರೆಗೆ ಹಬ್ಬಿರುವ ಕರ್ನಾಟಕವು ಒಂದೆಂಬುದಕ್ಕೆ ಒಂದು ನಿದರ್ಶನವು ಈ ಹಾಡುಗಳಲ್ಲಿದೆ. ಅಲ್ಪ ಸ್ವಲ್ಪ ಪಾಠಭೇದದಿಂದ ಇವುಗಳಲ್ಲಿ ಅರ್ಧಕರ್ಧ ಹಾಡುಗಳು ಎಲ್ಲ ಕನ್ನಡ ಮನೆಗಳಲ್ಲಿ ಹರಡಿಕೊಂಡಿರಲು ಸಾಕು. ಈ ಜನಪದ ವೇದವೇ ಎಲ್ಲ ಕನ್ನಡಿಗರಿಗೂ ಸಾಮಾನ್ಯವಾದ ತಾಯ ಮೊಲೆಹಾಲು ಎಂಬುದು ಇದನ್ನೋದಿದವರ ಅನುಭವಕ್ಕೆ ಬಾರದೆ ಇರದು. ಈ ಅನುಭವದಿಂದ ಉಂಟಾಗುವ ಐಕ್ಯಭಾವವು ಅಂತಿಂತಹದಲ್ಲ. ಪ್ರಜಾಪ್ರಭುತ್ವದ ಈ ಕಾಲದಲ್ಲಿ ಜನಸಾಮಾನ್ಯದ ಹೃದಯದೊಳಗಿನ ಸುಖದ ಕನಸೆಂತಹದೆಂಬುದನ್ನು ಕಂಡುಕೊಳ್ಳಲು ಇದರಂತಹ ಬೇರೆ ಕೈಗನ್ನಡಿಯಿಲ್ಲ.

ಅದರಲ್ಲಿಯೂ ಸ್ತ್ರೀದಾಕ್ಷಿಣ್ಯವುಳ್ಳ ಈ ಕಾಲದ ಜನರೆಲ್ಲರೂ ಸ್ತ್ರೀಯರ ಈ ಪರಂಪರಾಗತ ಸಾಹಿತ್ಯವನ್ನು ಓದಲೇಬೇಕು. ಸ್ತ್ರೀ ಹೃದಯವು ಇಲ್ಲಿ ಲಾಸ್ಯವಾಡುತ್ತಿದೆ. ಸಾಹಿತ್ಯ ಸಂಸ್ಕಾರದ ದೃಷ್ಟಿಯಿಂದಲೂ ಇದರ ಮಹತ್ವವಿದೆ. ಸ್ಕಾಟ್, ಬರ್ನ್ಸ್, ವರ್ಡ್ಸ್‌ವರ್ತ್ ಮೊದಲಾದ ಆಂಗ್ಲ ಕವಿಗಳ ಕಾವ್ಯಗಳಲ್ಲಿ ನಾಡಹಾಡುಗಳ, ಜನಪದಗೀತಗಳ ಸಂಸ್ಕಾರ ವನ್ನು ಕಾಣಬಹುದು. ಅದರಿಂದ ಅವರ ಕಾವ್ಯದಲ್ಲಿ ಒಂದು ಬಗೆಯು ದಾದ ನಾವೀನ್ಯ ಉಂಟಾಯಿತು. ನಮ್ಮ ಈಗಿನ ಕನ್ನಡ ಸಾಹಿತ್ಯಕ್ಕೆ ಆ ಸಂಸ್ಕಾರವು ಅವಶ್ಯವಿದೆ. ಸಂಸ್ಕೃತ ಇಂಗ್ಲೀಷ ಹಳೆಗನ್ನಡಗಳ ಪ್ರತಿಬಿಂಬವನ್ನು ತಳೆದ ಸಾಹಿತ್ಯಕ್ಕಿಂತಲೂ ಅಚ್ಚಗನ್ನಡದ ಅಚ್ಚೊತ್ತಿದ ಸಾಹಿತ್ಯದ ಅಗತ್ಯವು ಅಷ್ಟಿಷ್ಟೆಂದು ಹೇಳಬರದು. ಕಟ್ಟುಳ್ಳ ಮೈ, ಹುಟ್ಟುಸವಿಯುಳ್ಳ ನುಡಿ, ತಿಳಿಯಾದ ಬಗೆ, ಇವೆಲ್ಲವೂ ಬೇಕು ಈಗಿನ ಕವನಗಳಲ್ಲಿ.

ಇವೆಲ್ಲವುಗಳಿಗಿಂತ ಹೆಚ್ಚಿನ ಅಪೇಕ್ಷೆಯೊಂದಿದೆ—ಯಾರಿಂದಲೆ ಇವು ಬಂದವೊ, ಆ ಹೆಣ್ಣು ಮಕ್ಕಳಲ್ಲಿಯೇ ಈ ಹಾಡುಗಳ ವಾಡಿಕೆಯು ಕಡಿಮೆಯಾಗುತ್ತ ಬಂದಿದೆ, ಹಾಗಾಗಬಾರದೆಂಬುದು. ಹೆಣ್ಣುಮಕ್ಕಳ ಹಾಡುಗಳನ್ನು ಅವರ ಕೊರಳ ಕೊಳಲಿನಿಂದ ಕೇಳುವದರಲ್ಲಿ ಒಂದು ಸೊಗಸಿದೆ, ಒಂದು ಜೀವನದಾಯಕ ಶಕ್ತಿಯಿದೆ. ನವನಾಗರಿಕತೆಯೊ, ನೂತನ ಶಿಕ್ಷಣ ಸಂಪ್ರದಾಯವೊ, — ಏನೋ ಒಂದುಬಂದು ಆ ಹಳೆಯ ಹಾಡಿನ ಸಂಪ್ರದಾಯವನ್ನು ಬೀಳುಗಳೆಯುತ್ತಿದೆ. ಕನ್ನಡ ಕವನ ತುಂಗೆಯ ತವರೂರು ಈ ಹಾಡುಗಳು. ಅದರ ಸಂಸ್ಕಾರವು ಬೇಡವೇ ಕನ್ನಡ ಮಕ್ಕಳಿಗೆ ಚಿಕ್ಕಂದಿನಲ್ಲಿಯೇ ? ಕನ್ನಡಿಗರಿಗೆ ಬೇಡವೇ ಬೆಳೆದು ದೊಡ್ಡವರಾದ ಮೇಲೆ ? ಇದನ್ನೋದುವ ತಾಯಿ, ಅಕ್ಕಗಳಿರಾ ! ಈ ಹಳ್ಳಿಯ ಹಾಡುಗಳ, ಹಳೆಯ ಹಾಡುಗಳ ಹೊಳೆಯನ್ನು ಇಂಗಗೊಡ ಬೇಡಿ. ಮತ್ತೆ ಹನಿ ಹನಿ ಕೂಡಿ ಹಳ್ಳವಾಗಲಿ. ಹಳ್ಳ ಹಳ್ಳ ಕೂಡಿ ಹೊಳೆ ಯಾಗಲಿ. ಈ ಅಪೇಕ್ಷೆಯನ್ನು ಕನ್ನಡಿತಿಯರು ಕೈಗೂಡಿಸಿಕೊಡರೇ ?

೭

ವನಗೆ ತಿಳಿದ ಮಟ್ಟಿಗೆ ಗೆ। ಚೆನ್ನಮಲ್ಲಪ್ಪನವರು ವಿಜಾಪುರ

ಸಾಹಿತ್ಯಸಮ್ಮೇಲನದ ಕಾಲಕ್ಕೆ ಹಳ್ಳಿಯ ಸಾಹಿತ್ಯದ ವಿಷಯವಾಗಿ ಮಾತನಾಡಿದುದೇ ಮೊದಲು. ಅವರ ಪುಟ್ಟ ನಿಬಂಧವು ಮುಂದೆ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ ಪ್ರಕಟಿತವಾಯಿತು. ಹೊಸಪೇಟೆಯ ಶ್ರೀ. ಹಣುಮಂತ ಗೌಡರು ಮೊದಲಾದವರು ಲಾವಣಿಗಳ ಸಂದರ್ಭವನ್ನು ಆಗಾಗ್ಗೆ ಎತ್ತಿ ಮಾತನಾಡಿದರೂ, ಲಾವಣಿ ಸಾಂಗತ್ಯಗಳ ವಿಷಯವಾಗಿ ಶ್ರೀಮಾನ್ ಮಾಸ್ತಿ ವೆಂಕಟೇಶಯ್ಯಂಗಾರ್ಯರವರು ಪರಿಷತ್ಪತ್ರಿಕೆಯಲ್ಲಿ ಬರೆದ ಸೊಗಸಾದ ಲೇಖನವೇ ಮಹತ್ವದ ಬರೆಹ. ಕಲಬುರ್ಗಿ, ಬೆಳಗಾವಿ ಮತ್ತು ಮೈಸೂರು ಈ ಮೂರು ಸಮ್ಮೇಲನಗಳಲ್ಲಿಯೂ ಪ್ರಮುಖವಾಗಿ ಶ್ರೀಮಾನ್ ಶ್ರೀಕಂಠಯ್ಯನವರ ಪ್ರೋತ್ಸಾಹನದಿಂದಲೂ ಪ್ರೀತಿಗಾಗಿಯೂ ಜನಪದಸಾಹಿತ್ಯ ವಿಚಾರವನ್ನು ಕುರಿತು ಸಮ್ಮೇಲನದ ಸಭಾಸದರ ಸಮಕ್ಷಮದಲ್ಲಿ ಚರ್ಚಿಸುವ ಸಂಧಿ ನನಗೆ ದೊರಯಿತು. ಬೆಳಗಾವಿಯ ಸಮ್ಮೇಲನದಲ್ಲಿ ಶ್ರೀ. ಮಾಸ್ತಿಯವರು ಈ ವಿಷಯವನ್ನು ಕುರಿತು ಮಾತನಾಡಿದರು. ಮುಂದೆ ಜಯಕರ್ನಾಟಕ ಪತ್ರಿಕೆಯವರು ಜನಪದ ಸಾಹಿತ್ಯವನ್ನು ಸಂಗ್ರಹಿಸುವ ಯತ್ನಗಳಿಗೆ ಪೋಷಣೆಯನ್ನೀಯಲು ಆ ಮಾಸಪತ್ರಿಕೆಯಲ್ಲಿ ಇಂದಿಗೂ ಪ್ರತ್ಯೇಕವಾಗಿ ಪುಟಗಳನ್ನು ಕೊಡುತ್ತ ಬಂದಿರುವರು. ಈ ಮಧ್ಯದಲ್ಲಿ ಗೆ। ಪ್ರಲ್ಹಾದ ನರೇಗಲ್ಲ ರವರು 'ಕರ್ನಾಟಕ ಕಾಲೇಜ ಪತ್ರಿಕೆ'ಯಲ್ಲಿ 'ವಾಸ್ತವ ಸಾಹಿತ್ಯ' ಎಂಬ ಲೇಖನವನ್ನೂ, ಗೆ। ಬೆಟಗೇರಿಯವರು ಪರಿಷತ್ ಪತ್ರಿಕೆಯಲ್ಲಿ 'ಹಳ್ಳಿಗರ ಹಾಡುಗಳು' ಎಂಬ ಸೋದಾರಣವಾದ ನಿತಾಂತಮನೋಹರವಾದ ನಿಬಂಧವೊಂದನ್ನೂ ಮುಂಬಯಿಯ ಪ್ರಬೋಧಕ ಮಾಸಪತ್ರಿಕೆಯ ಸಂಪಾದಕರು ಹಿರಿಬಂರಹವೊಂದನ್ನೂ ಬರೆದು ಜನಪದ ಸಾಹಿತ್ಯ ಸಂಗ್ರಹದ ಕಾರ್ಯವನ್ನು ಎತ್ತಿಹಿಡಿದಿದ್ದಾರೆ. ಪ್ರಬುದ್ಧ ಕರ್ಣಾಟಕ, ರಂಗಭೂಮಿ, ಕಥಾಂಜಲಿ ಮೊದಲಾದ ಪತ್ರಿಕೆಗಳಲ್ಲಿಯೂ ಜನಪದ ಸಾಹಿತ್ಯವು ತಲೆದೋರದೆ ಇಲ್ಲ. ಈ ಪ್ರಯತ್ನಗಳ ಪ್ರಥಮಫಲವೆಂದು ಗೆ। ಚೆನ್ನಮಲ್ಲಪ್ಪನವರೂ ಅವರ ಗೆಳೆಯರೂ ಪ್ರಮುಖತಃ ಸಂಗ್ರಹಿಸಿದ, ಸಂಪಾದಿಸಿದ ಜನಪದ ಗಾಥಾ ಸಂಹಿತೆಯನ್ನು ಕನ್ನಡಿಗರಿಗೆ ಕೊಡುವ ಸುಯೋಗವು ಉಂಟಾಗಿದೆ.

೮

ಮಗಳು ಸೊಸೆ ಹೆಂಡತಿ ತಾಯಿ—ಹೀಗೆ ಹೆಣ್ಣಿನ ನಾಲ್ಕು ಜನ್ಮ ನಾಲ್ಕು ಅವತಾರಗಳಲ್ಲಿ ಅವಳನ್ನು ಬಣ್ಣಿಸಬೇಕೆಂದು ಸಂಕಲ್ಪವಿತ್ತು. ಆದರೆ ಕೆಲವು ಕಾರಣಗಳ ಮೂಲಕ ಅದು ಸಾಧ್ಯವಾಗಲಿಲ್ಲ. ಆದರೂ ಸುಮಾರಾಗಿ ಅದನ್ನೇ ಹೋಲುವಂತೆ ಈ ಸಂಗ್ರಹವನ್ನು ರಚಿಸಲಾಗಿದೆ. ಗೃಹಿಣೀಗೀತವೆಂದು ಈ ಸಂಗ್ರಹಕ್ಕೆ ಹೆಸರಿಡಬೇಕಾಗಿ ಇನ್ನೊಂದು ವಿಚಾರವಿತ್ತು. ಯಾಕೆಂದರೆ ಹೆಣ್ಣಿನ ಸ್ವಭಾವಸಿದ್ಧವಾದ ಉದಾರ ಹೃದಯದ ಸಂಸಾರಕ್ಕೆ ಇದು ಗೀತೆಯಂತಾದೀತೆಂಬ ಅಪೇಕ್ಷೆಯಿಂದ. ಆದರೆ ಗರತಿಯ ಹಾಡಿನ ಸೊಗಸು ಗೃಹಿಣೀಗೀತದಲ್ಲಿಲ್ಲವೆಂದು ಒಬ್ಬ ಸಹೃದಯರು ಹೇಳಿದರು. ಅದು ನಿಜವೇ. ಮನೆಮನೆಗೂ ಗರತಿಯರು ಕುಟ್ಟುವಾಗಲೊ ಬೀಸುವಾಗಲೊ ತೊಟ್ಟಿಲ ತೂಗುವಾಗಲೊ ತೊಡೆಯಲ್ಲಿ ಕೂಸನ್ನು ತಟ್ಟಿ ಮಲಗಿಸುವಾಗಲೋ ಹಾಡುವ ಸುಮಾರು ೮೦೦ ತ್ರಿಪದಿಗಳು ಈ ಸಂಗ್ರಹದಲ್ಲಿವೆ. ನಮ್ಮ ಸಂಗ್ರಹದಲ್ಲಿ ಇದರ ಮೂರು ನಾಲ್ಕರಷ್ಟು ಪದ್ಯಗಳು ಇನ್ನೂ ಇವೆ. ಈ ಸಂಗ್ರಹಕ್ಕೆ ದೊರೆಯುವ ಸತ್ಕಾರವನ್ನು ನೋಡಿಕೊಂಡು ಉಳಿದವುಗಳನ್ನು ಪುಸ್ತಕ ರೂಪವಾಗಿ ಪ್ರಕಟಿಸಬೇಕೆಂದು ಮನೀಷೆಯಿದೆ. ಅದನ್ನು ಸಫಲವನ್ನಾಗಿ ಮಾಡುವುದು ಕನ್ನಡಿಗರಿಗೆ ಕೂಡಿದ ಕೆಲಸ.

ಈ ಸಂಗ್ರಹದಲ್ಲಿ ವಿಶೇಷವಾಗಿ ವಿಜಾಪುರದ 'ತದ್ದೆವಾಡ' ನಾಡಿನ ಪದ್ಯಗಳೆ ಮೂರುಮುಕ್ಕಾಲು ಪಾಲಾಗಿ ಇವೆ. ಅಂತೆಯೇ ಅಲ್ಲಿಯ ಭಾಷೆಯ ಪ್ರಾಂತಿಕ ವೈಲಕ್ಷಣ್ಯಗಳು ಇದರಲ್ಲಿ ಸೇರಿವೆ. ಇದರಿಂದ ಕನ್ನಡ ಪ್ರಾಕೃತಗಳ ಅಭ್ಯಾಸಕ್ಕೆ ಅನುಕೂಲವಾಗಬಹುದು. ಅಂತಹ ಶಬ್ದಗಳ ಪಟ್ಟಿಯೊಂದನ್ನು ಕೊನೆಗೆ ಸೇರಿಸಲಾಗಿದೆ. ಕರ್ನಾಟಕದೊಳಗಿನ ಬೇರೆ ಬೇರೆ ಭಾಗದವರು ಹೀಗೆ ಪದ್ಯಗಳನ್ನು ಸಂಗ್ರಹಿಸಿ ಚೆನ್ನಾಗಿ ಬರೆದು ಕಳುಹಿದರೆ ಕನ್ನಡದ ಅಭ್ಯಾಸಕ್ಕೆ ದೊಡ್ಡದೊಂದು ಉಪಕಾರ ಮಾಡಿದಂತಾಗುವದು. ಇದನ್ನು ಎಷ್ಟು ಒತ್ತಿ ಹೇಳಿದರೂ ಸಾಲದು.

ದ. ರಾ. ಬೇಂದ್ರೆ

# ಆಶೀರ್ವಾದ

ಜಯಕರ್ನಾಟಕದಲ್ಲಿ ಅಚ್ಚಾದ ರೀತಿಯ ಹಳ್ಳಿಯ ಪದಗಳನ್ನು ಗ್ರಂಥರೂಪವಾಗಿ ಪ್ರಕಟಿಸುವುದು ನಮ್ಮ ಸಾಹಿತ್ಯದಲ್ಲಿ ಈಗ ಅವಶ್ಯವಾಗಿ ನಡೆಯಬೇಕಾದ ಕೆಲಸ. ಈ ಕೆಲಸವನ್ನು ಕೈಕೊಂಡು ಧಾರವಾಡದ ನಮ್ಮ ಗೆಳೆಯರ ಗುಂಪಿನವರು ನಮ್ಮ ಜನಕ್ಕೆ ಬಹಳ ಹಿರಿದಾದ ಸೇವೆಯನ್ನು ಮಾಡುತ್ತಿದ್ದಾರೆ. ಈ ಪದಗಳಲ್ಲಿ ನಮ್ಮ ಜನತೆಯ ಮನಸ್ಸು ಸಹಜವಾಗಿ ಸುಂದರವಾಗಿ ಚಿತ್ರಿತವಾಗಿದೆ. ಇವು ಉಪಯೋಗಿಸುವ ಮಾತು ಸುಲಭವಾದದ್ದು, ದಿನದ ಬಳಿಕೆಯದು; ಆದರೂ ಅದು ಹೃದಯದ ನೂರು ಭಾವಗಳನ್ನು ಅರ್ಥಕ್ಕೆ ನೇರವಾಗಿ ವರ್ಣಿಸುತ್ತದೆ, ಓದುವವರ ಮನಸ್ಸನ್ನು ಅರ್ಥಕ್ಕೆ ನೇರವಾಗಿ ಒಯ್ಯುತ್ತದೆ. ಕಾವ್ಯದ ವಸ್ತು ಕೇವಲ ಐಶ್ವರ್ಯವಂತರ ಬಾಳು ಮಾತ್ರವಲ್ಲ, ಕೇವಲ ಶೃಂಗಾರಲೀಲೆ ಮಾತ್ರವಲ್ಲ, ಎನ್ನುವುದೂ ಸಾಮಾನ್ಯ ಜನದ ಬದುಕಿನ ಬೇನೆ ಬೇಗೆಗಳೂ, ನಲುಮೆ ನಗೆಯಾಟಗಳೂ ಕಾವ್ಯದಲ್ಲಿ ಸುಂದರವಾಗಿ ರೂಪುಗೊಳ್ಳಬಹುದು, ಸಂಸ್ಕೃತರಾದ ಜನರ ಮನಸ್ಸನ್ನು ಮುಟ್ಟಬಹುದು, ಎನ್ನುವುದೂ ಈ ಪದಗಳಿಂದ ಕಾಣುತ್ತದೆ. ನಮ್ಮ ಬಡನಾಡಿನ ಬಡ ಜೀವನದ ವಿಷಯದಲ್ಲಿ ಮರುಕವನ್ನೂ ಇಂಥ ಬಡತನದಲ್ಲಿ ಬೆಳೆದರೂ ನಮ್ಮ ಅಕ್ಕ-ತಂಗಿಯರು, ತಾಯಿ-ಅಜ್ಜಿಯರು ತಮ್ಮ ಹೃದಯದಲ್ಲಿ ತುಂಬಿಕೊಂಡಿರುವ ಸೌಜನ್ಯ ಸಾರಳ್ಯ ಬಂಧುಪ್ರೇಮದ ಐಶ್ವರ್ಯವನ್ನು ಕುರಿತು ಹೆಮ್ಮೆಯನ್ನೂ ನಮ್ಮಲ್ಲಿ ಉಂಟು ಮಾಡುತ್ತವೆ. ಈ ಪದಗಳ ಸಮುಚ್ಚಯವು ಕನ್ನಡ ಜನದ ವಿನಯದ ಚಿತ್ರ, ಕನ್ನಡ ನುಡಿಯ ಗೆಲವಿನ ಕಳೆ, ಕನ್ನಡದ ಹೊಸ ಕವಿತೆಯ ಪೈರಿಗೆ ರಸ.

ಶ್ರೀಮಾನ್ ದತ್ತಾತ್ರೇಯ ಬೇಂದ್ರೆಯವರು ಮೈಸೂರು ಪ್ರಾಂತ್ಯಕ್ಕೆ ಬಂದಿದ್ದಾಗ ಈ ಪದಗಳಲ್ಲಿ ಹಲವನ್ನು ಅಲ್ಲಲ್ಲಿ ಸಭೆಗಳಲ್ಲಿ ಓದಿ ಹೇಳಿದರು. ಆಗ ಅವನ್ನು ಕೇಳಿದವರೆಲ್ಲ ಆನಂದಪಟ್ಟರು. ಅವುಗಳ ಸೊಗಸಿಗೆ ಮನಸೋತರು. ಅನೇಕರು ಇದನ್ನು ಪುಸ್ತಕರೂಪದಲ್ಲಿ ಅಚ್ಚುಮಾಡಿಸಬೇಕೆಂದು ಅಪೇಕ್ಷಿಸಿದರು. ಈ ಅಪೇಕ್ಷೆ ಈಗ ನೆರವೇರುತ್ತಿರುವುದು ಸಂತೋಷದ ವಿಷಯ. ಈ ಪದಗಳು ನಮ್ಮ ಜನರೆಲ್ಲರ ಆದರವನ್ನು

ಪಡೆಯಲೆಂದೂ ಇವುಗಳಿಂದ ಸಾಧ್ಯವಾದ ಎಲ್ಲ ಪ್ರಯೋಜನವನ್ನೂ ನಮ್ಮ ಸಾಹಿತ್ಯಸೇವಕರು ಹೊಂದಲೆಂದೂ ನಾನು ಹಾರಯಿಸುತ್ತೇನೆ.

ಮಾಸ್ತಿ ವೆಂಕಟೇಶಯ್ಯಂಗಾರ್

# ಅ ರಿ ಕೆ

' ಗರತಿಯ ಹಾಡು ' ನಮ್ಮ ಸ್ತ್ರೀಜೀವನದ ಒಳಗನ್ನಡಿ ; ಅದು ನಮ್ಮ ಹೆಣ್ಣುಮಕ್ಕಳ ಹೃದಯದ ಪಡಿಗನ್ನಡಿ. ಅದರಲ್ಲಿ ಮಮತೆಯ ಮಾಧುರ್ಯವು ಮೈವೆತ್ತಿದೆ ; ಪ್ರೇಮದ ಸತ್ವವು ಅಳವಟ್ಟಿದೆ. ಅದರಲ್ಲಿ ಹೆಣ್ಣಿನ ತ್ಯಾಗಬುದ್ಧಿಯು ತುಳುಕುತ್ತಿದೆ. ಕೌಟುಂಬಿಕ ಬಾಳಿನ ರಸವು ಪರಿಪಾಕ ಗೊಂಡಿದೆ. ಅದು ಜೀವನದ ಜೀವಾಳವಾಗಿದೆ ; ಸುಖದ ಸೆಲೆಯಾಗಿದೆ. ಅದು ನಮ್ಮಿಂದ ದೂರವಾದಂತೆ ಬಾಳು ಕಿಚ್ಚಿನ ಕುಂಡವಾಗುತ್ತದೆ. ಯಾಕಂದರೆ—

" ಜಗತ್ತಿನೊಳಗಿನ ದುಃಖವು ನಾಶವಾಗಬೇಕೆಂದೂ, ಮನುಷ್ಯನು ಸುಖಿಯಾಗಬೇಕೆಂದೂ ನಿಮಗನ್ನಿಸುತ್ತಿದ್ದರೆ, ನಿಮ್ಮ ಕೌಟುಂಬಿಕ ಸಂಬಂಧ ವನ್ನು ಚೆನ್ನಾಗಿ ಸರಿಪಡಿಸಿಕೊಳ್ಳತಕ್ಕದ್ದು. ತ್ಯಾಗವೇ ಅದಕ್ಕೆ ಏಕಮಾತ್ರ ವಾದ ಉಪಾಯ. ತ್ಯಾಗವೆಂದರೆ ಅರಣ್ಯವಾಸವಲ್ಲ; ಸಮಾಜದಿಂದ ದೂರ ಇರುವುದಲ್ಲ. ಭಾರತೀಯರು ತ್ಯಾಗವನ್ನು ಮನೆಯಲ್ಲಿಯೇ ಆಚರಿಸಬೇಕಾ ಗಿದೆ. ತ್ಯಾಗವೆಂಬ ತತ್ವಜ್ಞಾನವು ಅರಣ್ಯವಾಸಿಗಳಿಗೆ ಮಾತ್ರ ಕಟ್ಟಿಟ್ಟಿದ್ದರೆ ಅದರ ಪ್ರಯೋಜನ ನಮಗೇನು ? ನೀವು ಎಲ್ಲಿದ್ದರೂ ಹೇಗಿದ್ದರೂ ತ್ಯಾಗವು ನಿಮ್ಮನ್ನು ಉಚ್ಚಸ್ಥಿತಿಯಲ್ಲಿ ಇರಿಸುತ್ತದೆ; ನಿಮ್ಮ ಶಕ್ತಿಯನ್ನು ಬೆಳೆಸುತ್ತದೆ: ನಿಮ್ಮನ್ನು ಈಶ್ವರನನ್ನಾಗಿ ಮಾಡಿಬಿಡುತ್ತದೆ ; ನಿಮ್ಮ ಎಲ್ಲ ದುಃಖ-ಚಿಂತೆ ಗಳನ್ನು ನಿವಾರಿಸಿ ನಿಮ್ಮಲ್ಲಿ ಸುಖವನ್ನೂ ನಿರ್ಭಯವನ್ನೂ ತಂದು ತುಂಬುತ್ತದೆ."

ಗರತಿ ತ್ಯಾಗದ ಪುತ್ಥಳಿ. ತನ್ನವರೆಂದರೆ ಆಕೆಗೆ ಮಮತೆಯು ಚಿನ್ನ. ಪತಿಗೆ ಅರ್ಧಾಂಗಿಯಾಗಿ ಕೊಡುವಳು. ಮಕ್ಕಳಿಗೆ ರಕ್ತ-ರಸಗಳನ್ನು ದಾನ ವಾಗಿ ಕೊಡುವಳು. ಹುಟ್ಟಿದ ಮನೆಗೆ ಎರವಾಗಿ, ಕೊಟ್ಟಮನೆಗೆ ಹೆಸರಾಗು ವಳು. 'ತಾವರಿಯ ಗಿಡ ಹುಟ್ಟಿ ದೇವರಿಗೆ ನೆರಳಾದ' ಹಾಗೆ. ಆಕೆ ಆಡಿ ಬಂದ ಕಂದನ ಅಂಗಾಲು ತೊಳೆಯುವಳು. ತೆಂಗಿನ ನೀರಿನಿಂದ ಮಗುವಿನ 'ಬಂಗಾರ ಮಾರಿ'ಯನ್ನು ತೊಳೆಯಬಲ್ಲಳು. ತವರವರು ತನ್ನನ್ನು ಸರ ಮುತ್ತು ಮಾಡಿ ಸಲಹಿದರೂ, ಅತ್ತೆಯ ಮನೆಯಲ್ಲಿ ಅರವತ್ತು ಗಂಗಾಳ ಗಳನ್ನು ಬೆಳಗಲಿಕ್ಕೆ ಬೇಸರಿಯಳು. 'ಭಾವಯ್ಯ ಮುನಿದರೆ ಬಲಗಾಲ ಹಿಡಿ'ಯಲಿಕ್ಕೂ, 'ಭಾವಯ್ಯನ ಮಡದಿ ನೆಗೆಣ್ಣಿ ಮುನಿದರೆ ಬಾರಕ್ಕನೆಂದು ಕರೆ'ಯಲಿಕ್ಕೂ ಸಿದ್ಧಳಾಗುವಳು. ಮಾರಾಯರು ಬೈದರೆ ಕಣ್ಣೀರು ಕರೆಯು ವವಳು, ಮಾರಾಯರ ತಮ್ಮ ಮೈದುನ ಬೈದರೆ 'ಮಾಡಿಲ್ಲದ ಮಳೆ ಸುರಿ ದಂತೆ' ಅಳುವಳು. ಅತ್ತಿಗೆಯೆಂದರೆ ಆಕೆಯ ಪಾಲಿಗೆ ಹೆತ್ತಾಯಿ. ಬೆಣ್ಣೆ ಯಲ್ಲಿ ಮುಳ್ಳು ಮುರಿದಂತೆ ಮಾತಾಡಿದರೂ ನೆಗೆಣ್ಣಿಯ ಮಾತು ಕ್ಷಮ್ಯವೇ. ಹೊಟ್ಟೆಯ ಕೂಸು ತೊಡೆಯ ಮೇಲೆ ಮಲಗಿದ್ದರೂ ಬೀಸುವ ಕಾಯಕ ನಡೆಸುವ ಬಂಟಳು. ಶ್ರಮದಲ್ಲಿಯೂ ಹಿಗ್ಗು ಸೂಸುವಳು. ಹಾಡುತ್ತಲೇ ದುಡಿಯುವವಳು. ಆಸರಿಕೆ ಅಳಿದಿಟ್ಟವಳು, ಬೇಸರಿಕೆ ಬಳಿದಿಟ್ಟವಳು. ಆಕೆಯ ತ್ಯಾಗಕ್ಕೆ ಇದಕ್ಕಿಂತಲೂ ಹೆಚ್ಚಿನ ಉದಾಹರಣೆಗಳು ಇನ್ನೇನು ಬೇಕು?

ಆಕೆ ಪ್ರೇಮದ ಕಣಿ. ಕೂಲಿ ಮಾಡಿದರೂ, ಕೋರಿ ಹೊತ್ತರೂ ಗರತಿಗೆ ಆಕೆಯ ಪತಿಯು ಸರದಾರನೇ, ಅರಸನೇ, ಮಾರಾಯರೇ ಓರಿಗೆಯ ಪತಿಪುರುಷನು ಹಣಚಿಬಟ್ಟಿನ ಮೇಲೆ ಹರಿದಾಡುವ ಕುಂಕುಮವಿದ್ದ ಹಾಗೆ; ಅವನಿಂದ ಆಕೆ ತವರು ಮರೆಯುವಳು. ಆತನು ಸರದೊಳಗೆ ಇರುವ ಗುಳದಾಳಿಯಂತೆ ಸರ್ವಬಳಗದಲ್ಲಿ ಶ್ರೇಷ್ಠನು; ಅವನಿಂದ ಸರ್ವಬಳಗ ವನ್ನೂ ಮರೆಯುವಳು. ಆತನ ನಗೆ ಹಚ್ಚಡದ ಪದರೊಳಗಿನ ಅಚ್ಚಮಲ್ಲಿಗೆ ಹೂವಿದ್ದಂತೆ. ಪತಿಯ ರೂಪು ಕಮಲದ ಹೂ; ಆತನ ಸಹವಾಸ ಮಲ್ಲಿಗೆಯ ಮಾಯೆ. ಬೆಂದಿರುಹಿ ಸಾಗಿದ ರಾಯರ ಕಾಲಹಿಮ್ಮಡ ಕಾಣಿಸಿ ದರೂ ಅದು ಕಮಲವೇ; ಚಂದರನಿಗಿಂತ ಬಲು ಚೆಲುವಾಗಿರುವದು! ಅರಸರ

ಪಯದಿಂದ ದೊರಕೊಂಡ ಅರಿಸಿಣ, ಕುಂಕುಮ, ಗೋದಮಲ್ಲಿಗೆಯು ಸನೆದಂಡೆ ಇವೇ ಆಕೆಯ ಸಕಲೈಶ್ವರ್ಯ! ಪತಿಯು ಇನ್ನೊಬ್ಬಳನ್ನು ಲಗ್ನವಾಗುವ ಸಂದರ್ಭವು ಕಾಣಸಿಕೊಂಡಾಗ, "ಮಕ್ಕಳಾಗಲಿಲ್ಲವೆಂದು ಬೇರೊಂದು ಲಗ್ನವೇ ? —ನಾನು ಚೆಲುವೆಯಲ್ಲವೆಂದು ಇನ್ನೊಬ್ಬಳೊಡನೆ ವಿವಾಹವೆ ?" ಎಂದು ಶಂಕಿತಳಾಗಿ ಪತಿದೇವನಲ್ಲಿ ಹೊಟ್ಟೆಹೊಕ್ಕು ಹೇಳಿಕೊಳ್ಳುವ ಆಕೆಯ ಮಾತು ಹೊಟ್ಟೆಯೊಳಗಿನ ಹರಳು ಕರಗಿಸುವಂಥದು ! ಹಾಗೆ ಮಾತಾಡುವದಕ್ಕೆ ಹಿನ್ನೆಲೆ ಯಾವುದೆಂದರೆ, ಅಲ್ಲಿ ಹೃದಯದ ಮಾತು ಹೃದಯಕ್ಕೆ ಅರ್ಥವಾಗುವದು !!

ರಾಯ ಬರತಾರಂತ ರಾತ್ರೀಲಿ ನೀರಿಟ್ಟ
ರನ್ನ ಬಟ್ಟಲಕ ಮಣಿ ಹಾಕಿ । ಕೇಳೇನ।
ಸಣ್ಣವಳ ಮ್ಯಾಲ ಸವತ್ಯಾಕ ॥

ಅಂಗೀಯ ಮ್ಯಾಲಂಗಿ ಛಂದೇನೊ ನನ ರಾಯ
ರಂಬಿ ಮ್ಯಾಲ ರಂಬಿ ಪ್ರತಿರಂಬಿ । ಬಂದರ ।
ಛಂದೇನೊ ರಾಯ ಮನಿಯಾಗ ॥

ಪುನರ್ವಿವಾಹಕ್ಕೆ ಇರಬಹುದಾದ ಎರಡು ಕಾರಣಗಳಿಗೂ ಸಮಾಧಾನ ಹೇಳುವಳು. ಮಕ್ಕಳಾಗಲಿಲ್ಲವೆ ? ಹಾಗಾದರೆ ನಾನಿನ್ನೂ ಸಣ್ಣವಳು ; ಅವಕಾಶ ಮೀರಿಲ್ಲ ! ತಾನು ಕುರೂಪಿಯೇ ! ಅಲ್ಲ, ರಂಭೆಯ ಮೇಲೆ ಪ್ರತಿರಂಭೆ ಬರುವುದು ಛಂದವಲ್ಲ ! ಇಷ್ಟಾಗಿಯೂ ಬೇರೊಬ್ಬ ಸ್ತ್ರೀಯಳ ಆವಶ್ಯಕತೆಯಿದ್ದರೆ ಅದಕ್ಕೆ ತನ್ನ ಒಪ್ಪಿಗೆಯಿರುವುದನ್ನು ಸೂಚಿಸುವಳು.

ಗಂಡ ಪಂಡಿತರಾಯ ರಂಡೀಯ ಮಾಡಿದರ
ಭಂಡ ಮಾಡುವರ ಮಗಳಲ್ಲ । ಕೊರಳಾನ ।
ಗುಂಡು ಬೇಡಿದರ ಕೊಡುವೇನ ॥

ಸತಿಯ ಔದಾರ್ಯವನ್ನು ದುರುಪಯೋಗಪಡಿಸಿಕೊಂಡ ಪತಿಯು ಅಡ್ಡಹಾದಿ ಹಿಡಿದುದನ್ನು ಯಾರಾದರೂ ಹಿತಚಿಂತಕರು ಆಕೆಯ ಕಿವಿಗೆ ಸುದ್ದಿ ತಗಲಿಸುವರು. ಆಗ ಸಹ ಆ ಬಾಲೆ ಸೈಗೆಡಲಾರಳು.

ಚಿಂತಾಕು ಇಟುಕೊಂಡು ಚಿಪ್ಪಾಟಿ ಬಳೆವಾಕೆ
ಚಿಂತಿಲ್ಲವೇನ ನಿನಗಿಷ್ಟು । ನಿಮರಾಯ ।
ಅಲ್ಲೊಬ್ಬಳ ಕೂಡ ನಗತಾನೆ ॥

ಎಂಬ ಮಾತಿಗೆ ಮರುನುಡಿಯುವುದೇನೆಂದರೆ—

ನಕ್ಕರ ನಗಲೆವ್ವ ನಗೆಮುಖದ ಕ್ಯಾದಿಗಿ
ನಾ ಮುಟ್ಟಿ ಮುಡಿವ ಪರಿಮಳ-। ದಾ ಹೂವ ।
ಅವಳೊಂದು ಬಾರಿ ಮುಡಿಯಲಿ ॥

ಅತಿಶಯದ ಸಹನೆಯು ಒಮ್ಮೊಮ್ಮೆ ಹೇಡಿತನಕ್ಕೆಳೆಯಬಲ್ಲದು ; ಹೇಸಿತನಕ್ಕೆಳಸಬಹುದು. ಆದರೆ ಗರತಿ ಹೊತ್ತು ನೋಡಿ, ಸಹನೆ ಮೀರಿದ ಚಂಡಿಯೂ ಆಗಿ ನಿಲ್ಲುವಳು. ಆಗ ಆಕೆಗೆ ಯಾರು ಈಡು ?

ಪರಿಮಳದರಸರು ಪರನಾರಿಗೊಲಿದರ
ಮನಿಮಡದಿ ಬಾಯಿ ಬಿಡಬ್ಯಾಡ । ತಾಪ್ತಮ್ಮ ।
ಮನಹೇಸಿ ಮನೆಗೆ ಬರತಾರ ॥

ಎಂದು ಸಂತವಿಸಿಕೊಳ್ಳುವ ಹೆಣ್ಣೇ ಹಿಂದುಗಡೆಯಲ್ಲಿ—

ಹೆರವರ ಹೆಣ್ಣಿಗಾಗಿ ಹೊರಗ ಮಲಗುವ ಜಾಣ
ಗಿಡದ ಮ್ಯಾಲೆರಡು ಗಿಣಿ ಕೂತು । ನುಡಿದಾವ ।
ಎರವನ್ನೊ ರಾಯ ನಿನ ಜೀವ ॥

ಎಂದು ಕಿಡಿಕಾರುವ ಕಿಂಕಾಳಿಯಾಗಿ ನಿಲ್ಲುವಳು.

ಗರತಿ ಹಚ್ಚಿಕೊಂಡವರಿಗೆ ಚೊಚ್ಚಿಲ ಮಗಳಾಗುವಳಾದರೂ ಬಿಟ್ಟಾಡಿಕೊಳ್ಳುವ ವೈರಿಯ ಮನೆಯ ಮುಂದೆ ಬಿಚ್ಚುಗತ್ತಿಯಾಗಿ ಹೊಳೆಯುವಳೆಂಬುದನ್ನು ಲಕ್ಷಿಸತಕ್ಕದ್ದಾಗಿದೆ. ಅಂಜಿಕೆ ತೋರಿದರೆ ಅಂಜುವರ ಮಗಳಲ್ಲ ಆಕೆ. ಮಂಜಾನದೊಳಗಿನ ಹುಲಿಕರಗಳನ್ನು ತೋರಿದರೆ ಅಂಜಿ ತಿರಗುವವರ ಸೊಸೆಯೂ ಅಲ್ಲ ಆಕೆ. ಹೀಗೆ ತವರಿಗೂ, ಅತ್ತೆಯ ಮನೆಗೂ ಕೂಡಿಯೇ ಕೀರ್ತಿ ತರುವ ಕುಲಾಂಗನೆ. ಅಲ್ಲದವರು ಆಡಿಕೊಂಡರೆ ಹೊಯ್ಲು ಹೋಳಿಗಯಾಗಿ ನಿಲ್ಲುವ ವೀರಾಂಗನೆ. ಜಗತ್ತೇ ಪ್ರತಿಕೂಲವಾಗಿದ್ದರೂ ತನ್ನ ಸತ್ವ ತೊರೆಯಳು; ತತ್ವ ಮರೆಯಳು.

ಆರ್ಯಾಣದಡವ್ಯಾಗ ಯಾರಾಣೆ ಕೊಡಲೆವ್ವ
ಸೂರ್ಯಾ ಸಿನ್ನಾಣೆ ಶಿವನಾಣೆ । ಕೊಟ್ಟೇನ ।
ಅರ್ಯಾಣ ಗದ್ದು ಬರುವೇನ ॥

ಎಂಬುದೇ ಆಕೆಯ ಹೂಣಿಕೆ; ಅದೇ ರಭಸವೇ ಜೀವನ ಸಂಗ್ರಾಮದಲ್ಲಿ

ಹೋರಾಡುವುದಕ್ಕೆ ಆಕೆಗೆ ಬಲವನ್ನು ನೀಡುವದು. ಅಂಥ ಗರತಿಯರ ಸಂತಾನವೇ ರಾಜ್ಯ ಕಟ್ಟಿ ಆಳಿತು; ಜ್ಞಾನ ಸಿದ್ಧಿಯನ್ನು ಪಡೆಯಿತು; ಅಷ್ಟೈಶ್ವರ್ಯಗಳನ್ನು ಪ್ರಪಂಚಕ್ಕೆ ನೀಡಿತು. ಆ ಕಥೆಗೆ ಕಾರಣವಾದ ಗರತಿಯ ಅಂತರಂಗದ ಚಿತ್ರವೇ ' ಗರತಿಯ ಹಾಡಿ 'ನಲ್ಲಿಲ್ಲ ಚಿತ್ರಿತವಾಗಿದೆ. ಹಾಡು ಸಹ ಹುಡಿಗೂಡಿ ಹೋಗುತ್ತಿರುವಾಗ ಆಕೆಯ ಅಂಥ ಬಾಳು ನೋಡುವುದಕ್ಕೆ ಸಾಧ್ಯವೆಲ್ಲಿ ? ಮುಂಚಿತವಾಗಿ ಇಂದು ಆ ಹಾಡು ಪಡೆಯ ಬೇಕಾಗಿದೆ; ಬಳಿಕ ಆ ಪಾಡು ಹಡೆಯಬೇಕಾಗಿದೆ. ಹಾಡು ಅಳಿದಿದ್ದ ರಿಂದಲೇ ಬಾಳು ಕಾಣೆಯಾಗಿದೆ. ಗರತಿಯು ಬಾಳೇ ಹುಳದ ಬಾಯಿಗೀಡಾ ಗಿರುವಾಗ ಆಕೆಯ ಸಂತಾನಕ್ಕೆ ಉಜ್ವಳವೆಲ್ಲಿ ? ಮನೆ ಅಗ್ನಿಕುಂಡ, ಬಾಳು ಬೀದಿಯ ಹುಡಿ ಆಗಿ ನಿಂತಿರುವಾಗ ನಾಡಿನ ಪುನರುಜ್ಜೀವನಕ್ಕೂ ಕೌಟುಂಬಿಕ ಸ್ವಾಸ್ಥ್ಯಕ್ಕೂ ಗರತಿಯ ಹಾಡಿನ ಪಾರಾಯಣ ನಡೆಯಬೇಕಾದುದು ಅತ್ಯವಶ್ಯ. ಹೇಗೆಂದ್ಧರೆ—

'ಹೆಂಗಸಿನ ಬುದ್ಧಿ ಮೊಣಕಾಲ ಕೆಳಗೆ' ಎಂದು ಬುದ್ಧಿವಂತ ಗಂಡಸು ಹೀಗಳಿಯುವದುಂಟು. ಅಹುದು. ಬುದ್ಧಿ ಅಷ್ಟು ಕೆಳಗಿರುವದ ರಿಂದಲೇ ಹೆಂಗಸಿನ ಹೃದಯವು ಮಾಸದೆ ಉಳಿದಿದೆ. ಗಂಡಸಿನ ಬುದ್ಧಿ ಅವನ ಹೃದಯವನ್ನೂ ಮುಸುಕಿ ತಲೆಯವರೆಗೇರಿ ನಿಂತಿದೆ; ತಲೆಗೂ ಮೇಲಕ್ಕೆ ನೆಗೆದಿದೆ. ಆದ್ದರಿಂದಲೇ ಆತನ ಮಾತುಗಳು ಹೃದಯದಿಂದ ಹೊರಡದೆ, ಗಂಟಲಿನಿಂದ ಹೊರಡುತ್ತವೆ. ಅಂತೆಯೇ ಅವು ಒಂದು ಕಿವಿ ಯಲ್ಲಿ ಸೇರಿ, ಇನ್ನೊಂದು ಕಿವಿಯಿಂದ ಹೊರಬಿದ್ದು ಹೋಗುತ್ತವೆ. ಹೃದಯದ ಮಾತು ಗಂಟಲಿನವರೆಗೇರಿ, ನಾಲಿಗೆಯಲ್ಲಿ ಜಾರಿ ಹೊರನುಸುಳುತ್ತವೆ. ಹಾಗ ನುಸುಳಿದ ಮಾತು ಕೇಳುವವನ ಕಿವಿಯಿಂದ ಗಂಟಲಿಗಿಳಿದು ಹೃದಯ ವನ್ನು ತಲಪುತ್ತವೆ. ಅಂತೆಯೇ ಅವುಗಳಲ್ಲಿ ಕಾಂತತೆಯಿರುತ್ತದೆ; ಕಾಂತೆ ಯರ ಮಾತು ಕಾಂತಿಯುತವಾಗಿರುವದರಿಂದ ಕಾವ್ಯದ ಮಾತು ಎನಿಸುತ್ತಿದೆ; ಕಾಂತೆಯೆಂದರೆ ಹೆಂಡತಿ ಮಾತ್ರವಲ್ಲ; ಅಕ್ಕ - ತಂಗಿ, ತಾಯಿ - ಮಗಳು ಮೊದಲಾದ ರೂಪಗಳಲ್ಲಿರುವ ಗರತಿ.

ಗರತಿಯೇ ಗೃಹಿಣಿಯೆನಿಸುತ್ತಾಳೆ. ಗೃಹಿಣಿಗೆ ಗೃಹವೇ ಕ್ಷೇತ್ರ. ತನ್ನ ಕ್ಷೇತ್ರವನ್ನು ಪರಿಶುದ್ಧವಾಗಿರಿಸುವುದೂ ವಾತಾವರಣವನ್ನು ಪವಿತ್ರ

ವಾಗಿರಿಸುವುದೂ ಗೃಹಿಣಿಯ ಆಡಳಿತಕ್ಕೆ ಸೇರಿದ್ದು, 'ನೂರು ಜುಟ್ಟುಗಳು ಒಂದೆಡೆಯಲ್ಲಿ ಧಾರಾಳವಾಗಿ ಇರಬಲ್ಲವು; ಆದರೆ ಮೂರು ಮುಡಿಗಳು ಒಟ್ಟಿಗೆ ಇರಲಾರವು' ಎನ್ನುವ ಮಾತಿನಲ್ಲಿ ಸತ್ಯಾಂಶವು ಸಾಕಷ್ಟಿದೆ. ಮನೆತನದ ಗಂಡಸರು, ನಿತ್ಯದ ಉದ್ಯೋಗಕ್ಕಾಗಿ ಮನೆ ಬಿಟ್ಟು ಹೊರಗೆ ಹೋಗಿ ಬಹಳ ವೇಳೆ ಕಳೆದು ವಿಶ್ರಾಂತಿಗಾಗಿಯೋ, ನವೋಲ್ಲಾಸವನ್ನು ಪಡೆಯುವುದ ಕ್ಕಾಗಿಯೋ ಮನೆಗೆ ಬರುವರು. ಅವರು ಬುದ್ಧಿವಂತರಾಗಿರುವದರಿಂದ ಹೊರಗಿನ ಸುದ್ದಿ-ಸಮಾಚಾರಗಳನ್ನಾಗಲಿ, ಓದಿದ ವಿಷಯವನ್ನಾಗಲಿ ಮಾತನಾಡಲು ಅವರಲ್ಲಿ ವಸ್ತುವಿರುತ್ತದೆ. ಆದರೆ ಹಗಲು ಹನ್ನೆರಡು ತಾಸು, ಹಲವು ಹೆಣ್ಮಕ್ಕಳು ಒಟ್ಟಿಗಿರುವುದರಿಂದಲೂ, ಅವರಿಗೆ ಮಾತನಾಡಲು ಬೇರೊಂದು ವಿಷಯ ಗೊತ್ತಿರದ ಕಾರಣದಿಂದಲೂ ಪರಸ್ಪರರ ಕುಂದು ಕೊರತೆಗಳನ್ನು ಹಿಗ್ಗಿಸಿ ಹೇಳುವದನ್ನಾಗಲಿ, ಸಣ್ಣ ಮಾತನ್ನು ಬೆಳೆಸಿ ಕತೆಮಾಡಿ ಹೇಳುವುದನ್ನಾಗಲಿ ಮಾಡುವುದು ಅವರಿಗೆ ಸಹಜವಾಗಿರುತ್ತದೆ. ನಿಂತ ನೀರು ಮಲೆಯುತ್ತದೆ; ಉರುಳದ ಕಲ್ಲಿಗೆ ಹಾವಸೆ ತಗಲುತ್ತದೆ. ಅದರಂತೆ ಹೆಣ್ಣುಮಕ್ಕಳ ಮನಸ್ಸು ಸರಿಕರ ಅಗಿ ಬಾರದ ಮಾತು, ನಡೆ, ಘಟನೆ ಇವುಗಳನ್ನು ಕೇಳಿ ಕಂಡು ಸಹಿಸಿ ಹೊಟ್ಟೆಯಲ್ಲಿ ಇರಿಸುತ್ತ ಹೋಗುವುದರಿಂದ ಜೀವವು ಭಾರವಾಗುತ್ತದೆ; ಜೀವನವು ಬೇಸರವಾಗುತ್ತದೆ. ಕೆಲವು ದಿವಸ ಪರಿಸ್ಥಿತಿಯನ್ನು ಬೇರ್ಪಡಿಸುವುದು ಅವಶ್ಯವೆನಿಸುತ್ತದೆ. ಅದರಿಂದ ಸೊಸೆ ತವರ್ಮನೆಯನ್ನು ನೆನೆಸುತ್ತಾಳೆ; ಅತ್ತೆ ಮಗಳ ಮನೆಯನ್ನೋ, ತನ್ನ ಅಕ್ಕ-ತಂಗೆಯರ ಮನೆಯನ್ನೋ ಹಾರಯಿಸುತ್ತಾಳೆ. ಸೊಸೆಯಾಗಲಿ, ಅತ್ತೆಯಾಗಲಿ ಹಾಗೆ ಬೇರೆಡೆಗೆ ಹೋಗಿಬಂದರೆ, ವಾತಾವರಣವು ತಿಳಿಯಾಗು ತ್ತದೆ. ಅಗಲಿಕೆಯ ಉಪಾಯ ಮಾಡದಿದ್ದರೆ, ಹೊಟ್ಟೆಯೊಳಗ ನುಂಗಿಟ್ಟು ಕೊಂಡ ವಿಷಮ ವಿಷಯದಿಂದ ತಲೆ ತಿರುಗತೊಡಗುತ್ತದೆ; ವಿಚಾರ ಹದ ಗೆಡುತ್ತದೆ; ಮಾತು ತಾಳ ತಪ್ಪುತ್ತದೆ. ಮಾತಿಗೆ ಮಾತು ಬೆಳೆದು ಕದನ ಕಾಣಿಸಿಕೊಳ್ಳುತ್ತದೆ. ಮಾತಿನ ಚಕಮಕಿಯಲ್ಲಿ ಕಿಡಿ ಕಾಣಿಸಿಕೊಳ್ಳುತ್ತವೆ; ಗುಡುಗು-ಗದ್ದರಣೆ ಮೊಳಗುತ್ತವೆ; ಅಡಿಗೆ ಮನೆಯಲ್ಲಿ ಕಣ್ಣೀರಿನ ಮಳೆ ಸುರಿಯುತ್ತದೆ. ಮನೆತನದವರು ನುಂಗಿಕೊಂಡ ಮಾತುಗಳನ್ನೆಲ್ಲ ಕಕ್ಕ- ಬೇಕಾಗುತ್ತದೆ; ಹೊರಗಿಂದ ಬಂದ ಗಂಡಸು ಸಿಡಿಲು ಚೆಲ್ಲುತ್ತಾನೆ. ಹಾಡಿ

ಪಾಡಿಕೊಂಡು ಅತ್ತು ಎದೆಯನ್ನು ಹಗುರು ಮಾಡಿಕೊಂಡು ಸಾಲದೆ, ಉಪವಾಸ ಮಲಗಿ ಹೊಟ್ಟೆ ಹಗುರು ಮಾಡಿಕೊಂಡು ಸಾಲದೆ, ಮೈತುಂಬ ಪಟು ತಿಂದು ಮೈ ಹಗುರು ಮಾಡಿಕೊಳ್ಳುವವರೆಗೆ ಚಿಕಿತ್ಸೆ ನಡೆಯುವುದು. ಅಷ್ಟಾದರೆ ಮನಸ್ಸು ತಿಳಿಯಾಗಿ, ಹೃದಯವು ಬಿಳಿಯಾಗಿ ಬಾಳಿನಲ್ಲಿ ಹೊಸ ಹುರುಪು ಕಾಣಿಸಿಕೊಂಡು ಇನ್ನೊಂದು ವಿನೂತನ ಪ್ರಕರಣವು ಆರಂಭವಾಗುತ್ತದೆ. ಇದೊಂದು ನೈಸರ್ಗಿಕ ಚಿಕಿತ್ಸೆಯೇ ಸರಿ. ಅದಕ್ಕೆ ರೋಗವನ್ನು ಪರಿಹರಿಸುವ ಉಪಾಯವೆಂದೇ ಹೇಳಬೇಕಾಗುತ್ತದೆ. ಆದರೆ ಆರೋಗ್ಯವನ್ನು ಕಾಪಾಡಿಕೊಳ್ಳುವ ದೈನಂದಿನ ಉಪಾಯವೇ ಸುಲಭವೂ ಸುಖಕಾರಕವೂ ಆಗಿದೆ. ಆ ಉಪಾಯವೆಂದರೆ 'ಗರತಿಯ ಹಾಡಿ'ನ ಪಠನವೇ ಸರಿ.

ಬೆಳಗು ಮುಂಜಾವು ಬೇಸರಳಿದ ಹೊತ್ತು; ಸೃಷ್ಟಿಯೆಲ್ಲ ಉಲ್ಲಾಸದಲ್ಲಿ ಹಾಡಿ, ಕುಣಿದು ಹಿಗ್ಗುವ ಹೊತ್ತು; ಬಾಸಿಗದ ಸಿಂಗಾರಿ ಕಾಣಿಸುವ ಹೊತ್ತು. ಇದು ಹಿನ್ನೆಲೆಯಾಯ್ತು. ಬೀಸುವ ಕಲ್ಲಿನ ಮಂದ್ರಷಡ್ಜದ ಸ್ವರವು ಮನವನ್ನು ಏಕಾಗ್ರಗೊಳಿಸಿ, ಚಿತ್ತಕ್ಕೆ ಸಮಾಧಾನ ತಂದು ಕೊಡಬಲ್ಲದು. ಹೊಟ್ಟೆಯಲ್ಲಿ ತಿಂಗಳುಗಟ್ಟಲೆ ನುಂಗಿಕೊಂಡ ಬೇಸರ-ಬಳಲಿಕೆಗಳನ್ನಾಗಲಿ, ನಲಿವು - ಅಮೋದಗಳನ್ನಾಗಲಿ ಕದನ ಆರಂಭವಾಗುವವರೆಗೆ ಕಾಯ್ದಿರಿಸಿಕೊಂಡು ಕಕ್ಕಿ ಎದೆಹಗುರು ಮಾಡಿಕೊಳ್ಳುವದಕ್ಕಿಂತ, ಎದೆಯ ಭಾರವನ್ನು ಹಾಡಿ ಹಾಡಿ ಹಿಗ್ಗಿನಲ್ಲಿ ಓಲಾಡಿ ಹಗುರುಗೊಳಿಸುವುದರಿಂದ ಕದನಗಳ ಅವಶ್ಯಕತೆ ತಪ್ಪುವುದಲ್ಲದೆ, ಹಿಗ್ಗು ಹೃದಯದಲ್ಲಿ ನೆಲೆಸಿ ನಿಲ್ಲುವುದು. ಆರೋಗ್ಯರಕ್ಷಣೆಯಾಗಲಿ, ಆರ್ಥಿಕಲಾಭವಾಗಲಿ ಉಂಟಾಗುವ ಮಾತಿಗಿಂತ ಹೃದಯದ ಹಿಗ್ಗು ಪರಮ ಮಂಗಲಕರ; ಕಲ್ಯಾಣಪ್ರದ. ಈ ಪ್ರಯೋಜನಕ್ಕಾದರೂ 'ಗರತಿಯ ಹಾಡು' ನಿತ್ಯನಿತ್ಯವೂ ಕೇಳಸಿಗಬೇಕಾಗಿದೆ; ಹಾಡಿ ನಲಿಯಬೇಕಾಗಿದೆ. ಗೃಹಿಣಿಗೆ ನಲಿವುಂಟಾದರೆ ಗೃಹವು ಹಿಗ್ಗಿನ ಬೀಡು; ಗೃಹಸ್ಥನು ತಣಿಯುವ ತಾಣ. ಅದರಿಂದ ಮನೆತನದಲ್ಲಿ ಮಮತೆ ಮೈದೋರಿ ಮನೆಯು ಶಾಂತಿಯ ನಿಲಯವಾಗುತ್ತದೆ; ಜೀವನವೇ ಸುಖದ ಆಲಯವಾಗುತ್ತದೆ.

ಮನೆಯನ್ನು ಶಾಂತಿಯ ನಿಲಯ ಮಾಡಿಕೊಂಡ, ಜೀವನವನ್ನು ಸುಖದ ಆಲಯ ಮಾಡಿಕೊಂಡ ಗೃಹಿಣಿಯು ಕಾಂತಿಯುತವಾದ್ದು ಮಾತೇ

ಕಾವ್ಯಮಾತೆಯಾದ ಗರತಿಯು ಹಾಡಾಗಿ ಮುಗಿಲವರೆಗೆ ತೆರೆತೆರೆಯಾಗಿ ತೂರಿ ನಿಂತಿದೆ. ಗರತಿಯ ಬಾಳಿನ ಪ್ರತಿಬಿಂಬವಾಗಿ ಗರತಿಯ ಹಾಡು ಅಂದು ಕಾಣಿಸಿಕೊಂಡರೆ, ಇಂದು ಗರತಿಯ ಹಾಡಿನ ಪ್ರತಿಭೆಯಲ್ಲಿ ಗರತಿಯು ಬಾಳು ಪಡಿಮೂಡಬೇಕಾಗಿದೆ. ಹೆಂಡಿರು-ಮಕ್ಕಳಲ್ಲಿ ಮಮತೆ ಮೈದೋರಿ ಪ್ರೇಮದ ಪರಿಪಾಕವಾಗದಿದ್ದರೆ, ನಾಡಬಾಂಧವರಲ್ಲಾಗಲಿ, ಮಾನವ ಕುಲ-ಕೋಟಿಯಲ್ಲಾಗಲಿ ಪ್ರೇಮವು ಕಾಣಿಸಿಕೊಳ್ಳಬಲ್ಲದೇ? ಜೀವ-ಜಡ-ಜಗತ್ತು ಪ್ರೇಮದ ಪ್ರತೀಕವಾಗಿ ತೋರ್ಪಡಿಸಬಲ್ಲದೇ ? ಬೀಸುವ ಕಲ್ಲಿನ ಬಳಿಯೆ ತವರ್ಮನೆಯಾದರೆ, ಬೀಸುವ ಕಲ್ಲಿನ ಪದಗಳೇ ದುಃಖ ಹೊರಬೀಳಿಸುವ ಉಪಾಯವಾದರೆ, ಬೀಸುವ ಕಲ್ಲಿನ ಗರ್ಗರ ಸಪ್ಪಳವೇ ಏಕಾಂತವಾದರೆ, ಗರತಿಯು ಸುಖ-ಸಮಾಧಾನಗಳಿಂದಲೂ, ಹಿಗ್ಗು-ಹುರುಪುಗಳಿಂದಲೂ ಮನೆ ತನದ ಭಾರವನ್ನೆಳೆಯುವದಕ್ಕೆ ಸಮರ್ಥಳಾಗುತ್ತಾಳೆ. ಆಗ ಆಕೆ ಹಾಡುವ ಲಾಲಿಯು ಕಳೆಗೊಳ್ಳುತ್ತದೆ ; ಆಕೆ ನುಡಿಯುವ ಲಲ್ಲೆಯು ಕಳೆಗೊಳ್ಳುತ್ತದೆ. ಬಡತನದ ಕಾರಣದಿಂದ ಹಿಟ್ಟಿಗೆ ಕೊರತೆಯಾದರೂ, ಅಕ್ಕರೆಯ ಸುರಿ ಮಳೆಯಲ್ಲಿ ಲಾಲಿಯು ಹಸುಳೆಗೆ ಅರ್ಘವಾಗಿ, ಅದು ಸಮಾಧಾನ ತಳೆ ಯುತ್ತದೆ ; ಲಾಲನೆಯು ದಿವ್ಯಹರಕೆಯಾಗಿ ಹಸುಳೆಯು ಮಾಂಗಲ್ಯವನ್ನು ಪಡೆಯುತ್ತದೆ. ಆಗ ಗಂಡ-ಹೆಂಡಿರು ಜಗಳಾಡಿದರೆ ಗಂಧ ಹೊರಡುತ್ತದೆ; ತಾಯಿಮಕ್ಕಳಲ್ಲಿ ನಡೆಯುವ ವಾಗ್-ವಿವಾದವು ತಾಳ ಬಾರಿಸಿದಂತಾಗುತ್ತದೆ.

" ಕಟ್ಟಾಣಿ ಗುಂಡೀಗಿ ಸಿಟ್ಟು ಮಾಡಲಿಬ್ಯಾಡ ।
ಬಿಟ್ಟು ಬಂದೀದ ಬಳಗೆಲ್ಲ । ಪತಿಪುರುಷ ।
ಕಟ್ಯಾರ ತಮ್ಮ ಪದರಾಗ ॥"

ಎಂಬ ಮಾತಿನ ಅರ್ಥವು ಪತಿಗಷ್ಟೇ ಆಗುತ್ತದೆಂದಲ್ಲ ; ಮನೆತನದವರಿಗೆಲ್ಲ ಮನವರಿಕೆ ಆಗುತ್ತದೆ. ಪರಸ್ಪರರಲ್ಲಿ ಕೃತಜ್ಞತೆ ತಲೆದೋರುತ್ತದೆ. " ಕೃತಜ್ಞತೆಯೇ ಮನುಷ್ಯನ ಹಿರಿಮೆಯನ್ನು ಅಳೆಯುವದಕ್ಕೆ ಅಳತೆಗೋಲು " ಆಗಿರುವದರಿಂದ ಮನೆಯವರ ಮಟ್ಟೂ, ಮನೆತನದ ಮಟ್ಟೂ ಎತ್ತರ ವಾಗುವದರಲ್ಲಿ ಸಂಶಯವಿಲ್ಲ.

೨

ಮನಸ್ಸಿಗೆ ನೆಮ್ಮದಿ ಇಲ್ಲವೆಂತಲೇ ಸಂತಾನವೃದ್ಧಿಯು ಅತಿಶಯವಾಗಿ

ರುವದೆಂದು ಬಲ್ಲವರು ಹೇಳುತ್ತಾರೆ ; ಮಕ್ಕಳೆಂದರೆ ನೊಣದ ಪಾಯಸವೆನ್ನು ವಷ್ಟು ಹೇಸಿಕೆ ಹಿಡಿದಿದೆ. ಅನ್ನದ ಪ್ರಶ್ನೆಗಿಂತ ಈಗ ಸಂಯಮದ ಪ್ರಶ್ನೆಯೇ ಅಧಿಕವಾಗಿದೆ. ಅಂಥ ಸಂಯಮಕ್ಕೆ ಮನಸ್ಸಿನ ನೆಮ್ಮದಿ ಉಪಾಯವಾಗ ಬೇಕಾಗಿದೆ ; ಮನೆಯಲ್ಲಿ ಹಿಗ್ಗು ನೆಲೆಯೂರಬೇಕಾಗಿದೆ ; ಮನೆತನದಲ್ಲಿ ಶಾಂತಿ ಬೇರು ಬಿಡಬೇಕಾಗಿದೆ. ಹಾಗೆ ಆದಾಗಲೇ ನಾವು 'ತೊಟ್ಟಿಲದಾ ಗೊಂದು ತೊಳೆದ ಮುತ್ತು' ಕಾಣಬಲ್ಲೆವು. ಅದು ಅತ್ತರೊಂದು ರುಚಿ, ನಕ್ಕರೊಂದು ರುಚಿ-ಆಗುವುದು ಆವಾಗಲೇ. "ಅಮರಾವತಿಯೆಂಬ ಎಳೆ ದೋಟದೊಳಗಿನ ಅರಗಿಳಿಯ ತಂದು ಕೊಡುವೆನು-ಅಳದಿರೋ ಅಣ್ಣಯ್ಯಾ" ಎಂದು ರಂಬಿಸುವ ಮಾತುಗಳನ್ನು ಆಗ ಮಾತ್ರ ಕೇಳಬಲ್ಲೆವು. "ಕೂಸೇ ನೀ ದಾರ ಮಗನೆಂದು ದೇಶದಿಂದೆರಡು ಗಿಳಿ ಬಂದು ಕೇಳುವಂಥ ಮಗು ವನ್ನು ಪಡೆಯುವುದು ಆಗ ಮಾತ್ರ ಶಕ್ಯ. ಮಕ್ಕಳು ಹೊಟ್ಟೆ ಕಟ್ಟಿಕೊಂಡು ಬಂದ ಹುಳುಗಳಾಗದೆ 'ಸಕ್ಕರಿ ಸವಿಗಾರ,' 'ವೀಳ್ಯದ ರುಚಿಗಾರ,' 'ವೀರಭದ್ರನ ಅವತಾರ' ಆಗುವದಕ್ಕಾಗಲಿ, ಆಕಳ ಹಿಂದೆ ಕರು ಬಂದಂತೆ ಗಾಳಿದೇವರ ಕೂಡ ಗೂಳಿದೇವರು — ಮಾರಾಯರ ಹಿಂದೆ ಮಗ ಬರುವು ದಕ್ಕಾಗಲಿ ಗರತಿಯ ತಲೆಯೊಳಗಿನ ದುಗುಡು, ಹೃದಯದೊಳಗಿನ ಸೊಗಡು ಬಯಲಾಗಬೇಕಾಗಿದೆ. ಕೂಸು ಇದ್ದ ಮನೆಗೆ ಬೀಸಣಿಕೆ ಏಕೆ — ಎನ್ನುತ್ತ ಕಸ್ತೂರ್ದಂತಾ ಬಾಲ ಕಸದಾಗ ಆಡಿದರ ಕಸವಿಸಿಪಡುವ, ಹನ್ನೆರಡು ಬಟ್ಟಲು ಹಾಲು ಬೇಡಿದರೂ ಕುಡಿಯಕೊಡುವ ಸಂದರ್ಭ ಬರುವುದೂ ಆಗಲೇ ಸಾಧ್ಯ. ಮನೆತನದಲ್ಲಿ ಬಡತನವು ಕಂಗೆಡಿಸದು. ಪ್ರೇಮ ಸಂಪತ್ತಿ ನಲ್ಲಿ ಬಡತನವು ಏತರ ಕುಂದು ?

ಮುರುಕ ತೊಟ್ಟಿಲಿಗೊಂದು ಹರಕು ಚಾಪಿಯ ಹಾಸಿ
ಅರಚು ಪಾಪನ ಮಲಗೀಸಿ । ಅವರಕ್ಕ
ಕಲಕೇತ ಹಾಡಿ ಹಿಗ್ಗ್ಯಾಳ ॥

ಕೆಲೆಯುತ್ತ ಹಾಡಿ ಹಿಗ್ಗುವುದಕ್ಕೆ ಮುರುಕು ತೊಟ್ಟಿಲು ತಡೆಯಾಗದು ; ಹರಕು ಚಾಪೆ ಅಡ್ಡಯಿಸದು. ಪಾಪನ ಅರಚು ಸಹ ಹಾಡಿನ ಹಿಗ್ಗಿನಲ್ಲಿ ಕೊಚ್ಚಿಹೋಗಿ, ನಿದ್ರೆಹೋಗಿ ತಣಿಯಿತು. ಯಾಕಂದರೆ ಹಾಲಿನ ಹಂಬಲ ಕ್ಕಿಂತ ಲಾಲಿಯ ಬೆಂಬಲದಿಂದಲೇ ಮಕ್ಕಳು ತಣಿಯುವವು. ಹಾಲು ಹಸಿವೆ

ಮಾತ್ರ ಹಿಂಗಿಸಬಲ್ಲದು ; ಆದರೆ ಲಾಲಿ ಬೇಸರ ಕಸಿವಿಸಿಗಳನ್ನೂ ಹೋಗ ಲಾಡಿಸಬಲ್ಲದು. ಲಾಲಿಯಿದ್ದರೆ ಕಂದಯ್ಯನು ತಾಯ ಹಂಬಲವನ್ನೂ ಮರೆಯುವನು. ಲಾಲಿ ತಾಯಿಯ ಎದೆಯೊಳಗಿನ ಹಿಗ್ಗಿನ ಬುಗ್ಗೆ.

ಲಾಲೀಯ ಹಾಡಿದರ ಲಾಲೀಸಿ ಕೇಳ್ಯಾನ
ತಾಯಿ ಹಂಬಲ ಮರೆತಾನ । ಕಂದಯ್ಯ ।
ತೋಳ ಬೇಡ್ಯಾನ ತಲೆಗಿಂಬ ॥

ವ್ಯಕ್ತಿ ಸಂಬಂಧಗಳಲ್ಲಿ ಎರಡು ಬಗೆ. ಪ್ರೀತಿಯವರೊಡನೆ ಬರುವ ಸ್ನೇಹಸಂಬಂಧ ; ಸೇರದವರೊಡನೆ ಬರುವ ವೈರ ಸಂಬಂಧ. ಇವೆರಡರ ಹೊರತು ಇನ್ನೊಂದು ಸಂಬಂಧವೇ ವ್ಯಕ್ತಿಗೆ ಬರಲಾರದು. ವಾತ್ಸಲ್ಯ ಭಕ್ತಿಯಿರುವಂತೆ, ವೈರಭಕ್ತಿಯಿಂದಲೂ ಸಾಧಕನಿಗೆ ಸಿದ್ಧಿಯುಂಟಾಗುವ ವೆಂದು ಕಥೆಗಳಲ್ಲಿ ಕೇಳುತ್ತೇವೆ. ಸ್ನೇಹವಾಗಲಿ, ವೈರವಾಗಲಿ ಸಂಬಂಧದ ಎರಡು ಮಗ್ಗಲುಗಳೇ ಸರಿ. ವೈರ ಸಂಬಂಧವು ಕಸುಗಾಯಿಯಿದ್ದಂತೆ. ಸ್ನೇಹ ಸಂಬಂಧವು ಹಂಗಾಯಿಯಿದ್ದಂತೆ. ಹುಳಿ ಬಿರುಸುಗಳು ಕಸುಗಾಯಿಯ ಲಕ್ಷಣವಾದರೆ, ಸಿಹಿ ಮೃದುತ್ವಗಳು ಹಂಗಾಯಿಯ ಲಕ್ಷಣ. ಕಸು ಗಾಯಿಯೇ ಮಾರ್ಪಟ್ಟು ಹಂಗಾಯಿಯಾಗಬೇಕಾಗಿದೆ. ವೈರ ಸಂಬಂಧವೇ ಪಾಡಾಗಿ ಸ್ನೇಹ ಸಂಬಂಧವಾಗಬೇಕಾಗಿದೆ. ಒಂದು ವಿಪಾಕ, ಇನ್ನೊಂದು ಪರಿಪಾಕ. ಜೀವನದ ಅದ್ಭುತ ರಸಾಯನದಲ್ಲಿ ವಿಪಾಕವೇ ಪರಿಪಾಕ ಗೊಳ್ಳುತ್ತಲಿದೆ. ಜೀವವು ಕತ್ತಲೆಯಿಂದ ಬೆಳಕಿಗೆ ಸಾಗುವಂತೆ ಅದು ವಿಪಾಕದಿಂದ ಪರಿಪಾಕಕ್ಕೆ ಸಾಗಿದೆ. ಜೀವನದಲ್ಲಿ ಅಡಿಗಡಿಗೆ ಬರುವ ಬಿಸಿಲು-ನೆರಳುಗಳಿಂದ, ತೂಗಾಟ-ತೂರಾಟಗಳಿಂದ, ಮುದ್ದು-ಮೂದಲಿಕೆಗಳಿಂದ ಕಸುಗಾಯಿ ಪಾಡುಗೊಳ್ಳುತ್ತ ಸಾಗುವದು. ಹಾಗೆ ಪಾಡುಗೊಳ್ಳುವ ಜೀವಿಯ ಭಾವಗೀತೆಯೇ ' ಗರತಿಯ ಹಾಡು ' ಆಗಿದೆ.

ಆರಂಭದಲ್ಲಿಯೂ ಮುಗಿತಾಯದಲ್ಲಿಯೂ ಸುಖವನ್ನೆರೆಯುವ 'ಗರತಿಯ ಹಾಡು' ಅಂತರಾತ್ಮನ ನೆಲೆಯೆನಿಸುವ ಹೃದಯದ ಹೊನಲಾಗಿದೆ. ಅಂತೆಯೇ ಅದಕ್ಕೆ ಆನಂದದ ಕಳೆಯಿದೆ ; ಅದರಲ್ಲಿ ಹಿಗ್ಗಿನ ಬೆಳೆಯಿದೆ; ಹೀರದ ರಸವಿದೆ ; ಕುಂದದ ಶಿಳಿಯಿದೆ. ಸುಮಾರು ೨೫ ವರ್ಷಗಳಿಂದ ಓದಿ ತಿಳಿದ ' ಗರತಿಯ ಹಾಡು ' ಕೇಳಿ ತಣಿಯುವಂತಾಗಬೇಕೆಂದು ಹಾರಯಿಸುವುದು

ಯಥಾರ್ಥವಾಗಿದೆ. ಸಂಸಾರವೇದವೆನಿಸಿದ ಗರತಿಯ ಹಾಡುಗಳನ್ನು ನಮ್ಮ ಹೆಣ್ಣು ಮಕ್ಕಳು ಹಾಡುವುದೆಂದರೆ, ಕಾಮನಬಿಲ್ಲು ಕೋಗಿಲೆಯ ದನಿಯಲ್ಲಿ ಕೂಜಿಸಿ ಜೇನು ಹರಿಯಿಸಿದಂತೆ ! ನೋಡಿದರೆ ಚೆಲುವು ; ಕೇಳಿದರೆ ಸೊಂಪು ; ಸವಿದರೆ ಇನಿದು. ದೇಶದ ಪುನರುದ್ಧಾರದ ಹಲವು ಹೆಸರುಗಳೊಡನೆ ' ಗರತಿಯ ಹಾಡಿ 'ನ ನವಜನ್ಮವನ್ನೂ ಇಂದು ಕಂಡೆವಾದರೆ ನಾವು ಧನ್ಯರೇ ಸರಿ. " ಭಾರತದ ಆತ್ಮವೇ ಜಾಗ್ರತೆಗೊಂಡಿದೆ "ಯೆಂದು ಶ್ರೀ ಅರವಿಂದರು ಹೇಳುವುದನ್ನು ನಂಬಿದವರಿಗೆ ಆಕೆಯ ಅಂಗೋಪಾಂಗಗಳೆಲ್ಲ ಚೇತರಿಸಿ ಯೋಗ್ಯದಿಶೆಯಲ್ಲಿ ಪರಿಪುಷ್ಟಿ ಹೊಂದಿಬಿಡುವವೆಂದು ಪ್ರತ್ಯೇಕವಾಗಿ ಹೇಳುವ ಕಾರಣವೇ ಇಲ್ಲ.

ಗರತಿಯು ತನ್ನ ತಿಳಿಯಾದ ಬಾಳನ್ನೇ ಹಾಲಾಗಿ ಸುರಿದಂತೆ, ಹಾಡಾಗಿ ಉಸುರಿ ನಾಡತುಂಬ ಹರಿಯಿಸಿಬಿಟ್ಟಿದ್ದಾಳೆ. ' ಗರತಿಯ ಹಾಡು ' ತಾಯಿ ಕಟ್ಟಿದ ಬುತ್ತಿಯಂತಿದೆ. ಆ ಬುತ್ತಿಯ ಸವಿಯನ್ನು ಗರತಿಯೇ ಹೇಳಬೇಕು.

ತಾಯಿ ಕಟ್ಟಿದ ಬುತ್ತಿ ತರತರದ ಯಾಲಕ್ಕಿ
ಜರತರದ ಜಾಣೆ ಹಡೆದವ್ವ । ನಿನ ಬುತ್ತಿ ।
ಬಿಚ್ಚ್ಯಂಡ ಭೀಮರತಿ ಮ್ಯಾಲ ॥

ಕೃತಜ್ಞತಾಬುದ್ಧಿಯನ್ನು ಎಚ್ಚರಿಸಿದರೆ ಮಾತ್ರ ಆ ಬುತ್ತಿಯ ಸೊಗಸು ಗೊತ್ತಾಗುವದು. " ಯಾವುದೇ ವ್ಯಕ್ತಿಯ ಶ್ರೇಷ್ಠತೆಯನ್ನು ಅವನ ಕೃತಜ್ಞತಾಬುದ್ಧಿಯ ಮೇಲಿಂದ ಅಳೆಯಲಾಗುವದು " ಎಂದು ಶ್ರೀ ತಾಯಿಯವರ ಮಹಾವಾಕ್ಯವಿದೆ.

ಕೃತಜ್ಞತೆಯೆಂದರೆ, ಪರರು ನಮಗೆ ಮಾಡಿದ ಉಪಕಾರವನ್ನು ಸ್ಮರಿಸುವುದು. ಮನುಷ್ಯನಿಗೆ ತೀರ ಹತ್ತಿರದ ಪರರೆಂದರೆ ತಾಯಿ-ತಂದೆಗಳು. ಆ ಮೇಲೆ ಅಣ್ಣ-ತಮ್ಮ , ಅಕ್ಕ-ತಂಗಿ ಮೊದಲಾದ ಬಂಧು ಬಳಗದವರು; ಮಿತ್ರರು, ನೆರೆಹೊರೆಯವರು, ಊರವರು, ನಾಡಿನವರು ಅವರೆಲ್ಲರೂ ಒಂದಿಲ್ಲೊಂದು ಬಗೆಯಿಂದ ನಮ್ಮ ಮೇಲೆ ಉಪಕಾರ ಮಾಡಿರುತ್ತಾರೆಂಬುದು ಎಲ್ಲರಿಗೂ ತಿಳಿದ ವಿಷಯವಾಗಿದೆ.

ತಾಯಿಯ ರಕ್ತಮಾಂಸಗಳಿಂದಲೇ ನಮ್ಮ ಮೈ ಸಿದ್ಧವಾಗಿರುತ್ತದೆ; ಆಕೆಯ ಮೊಲೆಹಾಲು ಕುಡಿದು ಬೆಳೆದಿರುತ್ತೇವೆ; ಆಕೆಯ ಮುದ್ದನುಂಡು

ಚೆಲುವಾಗಿರುತ್ತೇವೆ; ಆಕೆ ಮೈದಡವಿ ನಮ್ಮ ಬೆನ್ನಿಗೆ ಭೀಮರಕ್ಷೆ ಇರಿಸಿದ್ದಾಳೆ. ಆಕೆ ಹಸಿವೆ, ನೀರಡಿಕೆ, ಹೇಸಿಕೆ ಮೊದಲಾದವುಗಳನ್ನು ನಮಗಾಗಿ ತ್ಯಾಗ ಮಾಡಿದ್ದರಿಂದಲೇ ನಾವು ಒಂದು ವ್ಯಕ್ತಿಯಾಗಿ ನಿಲ್ಲುತ್ತೇವೆ. ಬಹಳವೇನು-

ಕಣ್ಣಿಂಜಲ ಕಾಡಿಗಿ ಬಾಯೆಂಜಲ ವೀಳ್ಯಪ
ಯಾರಂಜಲುಂಡಿ ನನ ಮನವೆ । ಹಡೆದವ್ವ ।
ಬಾಯೆಂಜಲುಂಡು ಬೆಳೆದೇನ ॥

ತಾಯಿಯಂತೆ ತಂದೆಯೂ ನಮಗಾಗಿ ಮಹಾತ್ಯಾಗ ಮಾಡಿರುತ್ತಾನೆ. ಆತನ ದುಡಿಮೆಯಿಂದಲೇ ನಮಗೆ ಅನ್ನ-ಅರಿವೆ-ಆಶ್ರಯಗಳು ದೊರೆಯುತ್ತವೆ ಆತನ ಹೋರಾಟದಿಂದಲೇ ನಮಗೆ ವಿದ್ಯಾಭ್ಯಾಸ-ವ್ಯವಹಾರ ಕುಶಲತೆಗಳು ದೊರೆಯುತ್ತವೆ ; ಅದರಿಂದಲೇ—

ತಂದೀನ ನೆನೆದರ ತಂಗೂಳ ಬಿಸಿಯಾಯ್ತು
ಗಂಗಾದೇವಿ ನನ್ನ ಹಡೆದವ್ವ । ನೆನೆದರ ।
ಮಾಸೀದ ತಲೆಯು ಮಡಿಯಾಯ್ತು ॥

ತಾಯಿ-ತಂದೆಗಳ ಉಪಕಾರಕ್ಕೆ ಕೃತಜ್ಞರಾದವರಿಗೆ, ತಂದೆಯನ್ನು ನೆನಿಸಿ ಊಟ ಮಾಡಿದರೆ ತಂಗೂಳು ಸಹ ಬಿಸಿಯಾಗುತ್ತದೆ. ತಾಯಿಯಂತೂ ಗಂಗಾದೇವಿ ! ಆಕೆಯು ನಿಸ್ವಾರ್ಥ ಉಪಕಾರದ ಮಹಾಖನಿಯೇ ಆಗಿರುವದರಿಂದ ಆಕೆಯನ್ನು ನೆನೆಸುವದರಿಂದ ಮಾಸಿದ ತಲೆಯು ಮಡಿಯಾಗುತ್ತದೆ. ಅವರ ಹಿಂದೆ ಅಣ್ಣ, ಅಕ್ಕ, ಅಜ್ಜಿ, ಮುತ್ತಯ್ಯ ಮೊದಲಾದವರ ಉಪಕಾರವೂ ಮರೆಯದಷ್ಟು ಇರುತ್ತದೆ. ಕೃತಜ್ಞತಾಬುದ್ಧಿಯೇ ಮೈವೆತ್ತು ನಿಂತ ಗರತಿಯು, ಅಂಥ ತವರಿಗಾಗಿ ಮೈಮರೆತು ಹಾಡುವದೇನಂದರೆ—

ಹಾಲುಂಡ ತವರೀಗಿ ಏನೆಂದು ಹಾಡಲೆ
ಹೊಳೆದಂಡಿಲಿರುವ ಕರಕೀಯು । ಕುಡಿಯಂಗ ।
ಹಬ್ಬಲೇ ಅವರ ರಸಬಳ್ಳಿ ॥

ಉಪಕಾರಕ್ಕೆ ಪ್ರತ್ಯುಪಕಾರ ಮಾಡುವ ಅವಕಾಶ ದೊರೆಯದೆ ಹೋಗಬಹುದು. ಆದರೆ ಉಪಕಾರಸ್ಮರಣೆಗೆ ಮಾತ್ರ ಯಾವ ಅವಕಾಶವೂ ಕಾರಣವಿಲ್ಲ. ಅಪ್ಪರಿಂದ, ಗೆಳೆಯರಿಂದ ನೂರಾರು, ಸಾವಿರಾರು ಉಪಕಾರಗಳು

ನಮಗೆ ಒದಗಿರುತ್ತವೆ. ನಾವು ನಿರ್ಭಯರಾಗಿ ಜೀವಿಸುವುದಕ್ಕೂ, ಬಾಳಿನಲ್ಲಿ ಎಷ್ಟೇ ಆಗಲಿ ಸುಖಪಡುತ್ತಿರುವುದಕ್ಕೂ ನಮ್ಮ ನೆರೆಹೊರೆಯವರೂ, ನಾಡಿನವರೂ ಕಾರಣರಾಗಿರುತ್ತಾರೆ. ಇನ್ನೊಂದು ದೃಷ್ಟಿಯಲ್ಲಿ ಪ್ರಪಂಚದ ಮಾನವರೆಲ್ಲರ ಉಪಕಾರವೂ ನಮ್ಮ ಮೇಲೆ ಆಗಿರುತ್ತದೆ. ಹೇಗೆಂದರೆ— ನಮ್ಮ ವಿದ್ಯಾಭ್ಯಾಸವನ್ನು ಹಗುರುಗೊಳಿಸಿದ ಶಾಲೆ, ಪುಸ್ತಕ, ಮುದ್ರಣಾಲಯಗಳೂ, ನಮ್ಮ ಪ್ರವಾಸವನ್ನು ಸುಲಭಗೊಳಿಸಿದ ಉಗಿಬಂಡಿ-ವಿಮಾನ-ಹಡಗಗಳೂ, ಚಲಚ್ಚಿತ್ರ, ಬಾನುಲಿ ಮೊದಲಾದವುಗಳೂ ಪ್ರಪಂಚದೊಳಗಿನ ಮಾನವರು ನಮಗಾಗಿ ಹುಡುಕಿಕೊಟ್ಟು ಉಪಕರಿಸಿದ ಸಲಕರಣೆಗಳಾಗಿರುತ್ತವೆ.

ಮಾಂಸದ ಮುದ್ದೆಯ ರೂಪದಲ್ಲಿ ಭೂಮಿಗೆ ಬಂದಂದಿನಿಂದ, ಪ್ರೌಢಾವಸ್ಥೆಯನ್ನು ದಾಟಿ, ಮುಪ್ಪಿನವರಾಗುವವರೆಗೆ ನಮ್ಮನ್ನು ಎತ್ತಿ ಹಿಡಿದು, ನಮ್ಮ ಅಜ್ಞಾನ-ಅವಗುಣಗಳನ್ನು ಲೆಕ್ಕಿಸದೆ ಸಲಹುತ್ತ ಬಂದ ಭೂಮಿ ತಾಯಿಯ ಉಪಕಾರಕ್ಕಾಗಿಯೇ ದೇಶಭಕ್ತಿಯು ಮೈದೋರಿದೆ. ನಮ್ಮ ಒಳಗೂ ಹೊರಗೂ ಹರಹಿ ನಿಂತಿರುವ ಕುತ್ತುಗಳನ್ನು ಹತ್ತೆಯಿರಿಸಿ, ರಕ್ಷಣೆಯನ್ನೇ ನೀಡುತ್ತಿರುವ ದೈವಶಕ್ತಿಯನ್ನು ಸ್ಮರಿಸಿಯೇ ಮಾನವನು ದೈವಭಕ್ತಿಯನ್ನು ಕಂಡುಂಡು ಸಾರಿದ್ದಾನೆ.

ಮಂದೇನು ಕೊಟ್ಟೇತ ಮನವೇನು ದಣಿದೀತ
ಮಂಜಾನದಾನ ಗಿರಿಮಲ್ಲ । ಕೊಟ್ಟರ ।
ಮನಿ ತುಂಬಿ ನಮ್ಮ ಮನ ತುಂಬಿ ॥

ಎನ್ನುವಲ್ಲಿಯೂ,

ಶಿವ ಶಿವನೆಂದರ ಸಿಡಿಲೆಲ್ಲ ಬಯಲಾಗಿ
ಕಲ್ಲ ಬಂದೆರಗಿ ಕಡೆಗಾಗಿ । ಎಲೆ ಮನವೆ ।
ಶಿವನೆಂಬ ಶಬುದ ಬಿಡಬ್ಯಾಡ ॥

ಎನ್ನುವಲ್ಲಿಯೂ ದೈವಭಕ್ತಿಯಲ್ಲಿರುವ ದೃಢವಾದ ಶ್ರದ್ಧೆಯನ್ನು ಸ್ಪಷ್ಟವಾಗಿ ಅಳೆಯಬಹುದು. ದೈವಭಕ್ತಿಯ ತೆನೆಯಾಗಿ ನಿಂತ ಶರಣರೂ, ದಾಸರೂ ತಮ್ಮೊಳಗಿನ ಕೃತಜ್ಞತಾ ಬುದ್ಧಿಯನ್ನು ಹಲವು ವಿಧದಲ್ಲಿ ತೋರ್ಪಡಿಸಿಕೊಂಡಿದ್ದಾರೆ. " ಇಳೆ ನಿಮ್ಮ ದಾನ, ಬೆಳೆ ನಿಮ್ಮ ದಾನ " ಎಂದು ವಚನಿಸಿ ದೇವದೇವನ ಉಪಕಾರವನ್ನು ಸ್ಮರಿಸಿದ್ದಾರೆ.

" ಅನುಪಮ ದಾನಿ ಅಪ್ರತಿಮ ದಾನಿ
ಸಂದ ವೆಂಪಿನ ಘನ ದಾನಿ
ಕೌತುಕದ ದಾನಿ ಮಹೋನ್ನತ ದಾನಿ "

ಎಂದು ಕೀರ್ತಿಸಿದ್ದಾರೆ. "ನೀನಿತ್ತ ಸೌಭಾಗ್ಯ ನಿಬಿಡವಾಗಿರಲಿಕ್ಕೆ ಏನು ಬೇಡಲಿ ನಿನ್ನ ಬಳಿಗೆ ಬಂದು" ಎಂದು ಎದೆಬಿಚ್ಚಿ, ಬಾಯಿಬಿಚ್ಚಿ ಹಾಡಿದ್ದಾರೆ. "ನಾನೇಕೆ ಬಡವನೂ ನಾನೇಕೆ ಪರದೇಶಿ" ಎಂದು ಬಾಯಿತುಂಬಿ ಎದೆತುಂಬಿ ಉಸುರಿದ್ದಾರೆ. ಹೀಗೆ ಹಾಡಿದ ಶರಣರಲ್ಲಿ, ದಾಸರಲ್ಲಿ, ಕವಿವರರಲ್ಲಿ ಕೃತಜ್ಞತೆಯನ್ನು ತುಂಬಿದವರಾರು ? ಅದೆಲ್ಲ ತಾಯ ಗರತಿಯ ಕಣ್ಣಂಜಲವಾದ ಕಾಡಿಗೆಯೇ ಆಗಿದೆ; ಬಾಯೆಂಜಲವಾದ ವೀಳ್ಯೆಯೇ ಆಗಿದೆ. ಗರತಿಯ ಕಣ್ಣಂಜಲ-ಬಾಯೆಂಜಲಗಳನ್ನು ಪ್ರಸಾದವೆಂದು ಗ್ರಹಿಸಿದವರು ಶರಣರಾದರು; ಕವಿಗಳಾದರು ; ದಾಸರಾದರು. ಧರ್ಮಸ್ಥಾಪಕ ಧರ್ಮ ರಕ್ಷಕರಿಗಾಗಲಿ, ಪಂಡಿತ ಮೇಧಾವಿಗಳಿಗಾಗಲಿ ಅದೇ ಕಣ್ಣಂಜಲಿನ ಕಾಡಿಗೆ ಅಂಜನವಾಗಿ ದಿವ್ಯದೃಷ್ಟಿಯನ್ನೂ, ಅದೇ ಬಾಯೆಂಜಲಿನ ವೀಳ್ಯೆ ಅಮರ ಜೀವನವನ್ನೂ ನೀಡಿವೆ.

ಸಾಮಾನ್ಯರಾಗಿ ಹುಟ್ಟಿ, ಅಸಾಮಾನ್ಯತೆಯನ್ನು ಪಡೆದು, ಸಾವಿಲ್ಲದ ಕೇಡಿಲ್ಲದ ಕೀರ್ತಿಕಾಯವನ್ನು ಗಳಿಸಿದವರು ಕೃತಜ್ಞರಾಗಿಯೇ ಇದ್ದರೆಂದು ಕಂಡುಬರುವದು. ಕೆರೆಯ ನೀರು ಕೆರೆಗೆ ಅರ್ಪಿಸಿ ವರ ಪಡೆಯುವ ಸುಲಭ ಉಪಾಯದಿಂದಲೇ ಅವರು ಶ್ರೇಷ್ಠ ಮಾನವರಾಗಿ ಹೋದರೆನ್ನುವ ಮಾತು ಮರೆಯುವಂತಿಲ್ಲ. ಬೆಳೆ ಕೊಟ್ಟ ಹೊಲದ ಲಕ್ಷ್ಮಿಗೆ ನೈವೇದ್ಯ ಅರ್ಪಿಸುವುದಾಗಲಿ, ಮಳೆ ಸುರಿದ ದೇವತೆಗೆ ಯಜ್ಞ ಸಲ್ಲಿಸುವುದಾಗಲಿ ಕೃತಜ್ಞತೆಯಲ್ಲದೆ ಇನ್ನೇನು? ಅಜ್ಜನ ಹೆಸರು ಮೊಮ್ಮಗನಿಗಿಟ್ಟು ಕರೆಯುವುದೂ ಜಯಂತಿ ಪುಣ್ಯತಿಥಿಗಳನ್ನು ಆಚರಿಸುವುದೂ ಕೃತಜ್ಞತೆಯ ಲಕ್ಷಣಗಳಲ್ಲವೇ ? ಪ್ರಜೆಯೇ ಪರಮೇಶ್ವರನೆಂದು ತನ್ನ ಶಕ್ತಿಗಳನ್ನು ಅವರ ಸೇವೆಯಲ್ಲಿ ತೊಡಗಿಸಿದವನೂ, ನಾಡ ಸಂರಕ್ಷಣೆಗಾಗಿ ಅದರ ಸುಹಿತಕ್ಕಾಗಿ ಬಲಿದಾನ ಮಾಡಿದವನೂ ಕೃತಜ್ಞತೆಯ ಪಾಠವನ್ನು ಅಭ್ಯಸಿಸಿದವನೇ ಆಗಿರುತ್ತಾನೆ.

ಕೃತಜ್ಞತೆಯೆಂದರೆ ಬಾಳಿನಲ್ಲಿ ಗೆಲುವಿನ ಗುಟ್ಟು. ಆ ಗುಟ್ಟು ರಕ್ತಗುಣವಾದವನು ಶ್ರೇಷ್ಠ ಮನುಷ್ಯನಾಗುವುದು ಸಹಜವಾಗಿದೆ; ಸುಲಭವಾಗಿದೆ. ಅದು ಖರ್ಚಿಲ್ಲದ ಹಾದಿ.

" ಒಡೆಯರ ಬರವಿಂಗೆ ಕುನ್ನಿ ಬಾಲ ಬಡಿದರೆ
ವೆಚ್ಚವೇನು ಹತ್ತುವದು ಕೂಡಲಸಂಗಮದೇವಾ ? "

ತನ್ನನ್ನು ಸಾಕಿ ಸಲಹಿದವನ ಬರುಹೋಗುಗಳನ್ನು ನಾಯಿಯು ಕೃತಜ್ಞತೆಯಿಂದ ಕಾಯುತ್ತಿರುತ್ತದೆ. ನಾಯಿಯು ಕುನ್ನಿಗೂ ಆ ಗುಣವು ಸ್ವಾಭಾವಿಕವಾಗಬೇಕಷ್ಟೇ ? ತಿಳುವಳಿಕೆಯಿಂದ ತುಳುಕುವ ಮಾನವನಿಗೆ ಆ ಗುಣವು ಅಸ್ವಾಭಾವಿಕವೆಂದು ಹೇಗೆ ಹೇಳಲಿಕ್ಕಾಗುವದು ? ಮಕ್ಕಳಲ್ಲಿ ತಾನೇ ಹಂಚಿಹಾಕಿದ ತಿನಿಸಿದ್ದರೂ ತಾಯಿ, ತನಗಿಷ್ಟು ಕೊಡಿರೆಂದು ಕೈ ಮಾಡಿ ಕೇಳುವಂತೆ ನಮ್ಮನ್ನು ಸಲಹುವ ಶಕ್ತಿ ಕೇಳುತ್ತಿದೆ. ತನಗೆ ಬಂದ ಪಾಲಿನಲ್ಲಿ ಉಗುರಿನಿಂದ ಚಿವುಟಿ ಒಂದಿಷ್ಟು ತಾಯಕೈಗಿತ್ತ ಮಗುವನ್ನು ಆಕೆ ಬರಸೆಳೆದು, ಮುದ್ದು ಕೊಟ್ಟು ದಾನದ ತಿನಿಸನ್ನು ತಿರುಗಿ ಸಲ್ಲಿಸುತ್ತಾಳೆ; ತೆಗೆದಿರಿಸಿದಳೆಂದರೆ ಮತ್ತೊಮ್ಮೆ ಕೊಡುತ್ತಾಳೆ. ಇಷ್ಟೆಲ್ಲವನ್ನು ನಾವು ವ್ಯವಹಾರದಲ್ಲಿ ಕಂಡರೂ ನಮ್ಮ ಕೃತಜ್ಞತೆ ಅರಳಲೊಲ್ಲದಾಗಿದೆ. ಶ್ರೇಷ್ಠನಾಗಬೇಕೆನ್ನುವ ಹಂಬಲವಿದ್ದರೂ ಅದಕ್ಕೆ ಸರಿಯಾದ ಉಪಾಯ ಮಾಡಲಾರದೆ ನಾವು ಅಪಯಶಿಗಳಾಗುತ್ತಿದ್ದೇವೆ.

ನಮ್ಮ ಅಪಯಶದ ಪರಿಸ್ಥಿತಿ ನೀಗಿಸುವದಕ್ಕೂ, ನಮ್ಮಲ್ಲಿ ಕೃತಜ್ಞತೆಯನ್ನು ಮೊಳೆಯಿಸುವುದಕ್ಕೂ ಗರತಿ ನಡುಗಟ್ಟಬೇಕಾಗಿದೆ. ಗರತಿಯು ಹಾಡು ಆಕೆಗೆ ಪೌಷ್ಟಿಕವಾಗಬೇಕಾಗಿದೆ. ಹೊಸದಾಗಿ ನಾಡು ಕಟ್ಟುವದೆಂದರೆ, ಹಾಳು-ಬೀಳುಗಳಿಗೆ ಕೆಸರು ಮೆತ್ತುವದಲ್ಲ ; ಗಟ್ಟಿಯಾದ ನೆಲಗಟ್ಟಿನಿಂದ ಕಟ್ಟಡವು ಏರುತ್ತ ಹೋಗಿ ತಲೆಯೆತ್ತಿ, ಹೆಡೆಯೆತ್ತಿ ನಿಲ್ಲಬೇಕಾಗಿದೆ. ಗರತಿಯು ಹಾಡು ನಮ್ಮ ನಾಡ ಕಟ್ಟಡಕ್ಕೆ ನೆಲೆಗಟ್ಟಾಗಬೇಕಾಗಿದೆ. ಕೌಟುಂಬಿಕ ಜೀವನದಲ್ಲಿ ಉತ್ತಮತೆಯನ್ನು ತುಂಬಿ, ಗೃಹಸ್ಥಾಶ್ರಮದೊಳಗಿನ ಬಟುಗಳಲ್ಲಿ ಕೃತಜ್ಞತೆಯನ್ನು ಮೊಳೆಯಿಸಬೇಕಾದರೆ ಗರತಿಯ ಕಣ್ಣಂಜಲ ಕಾಡಿಗೆ ಬಾಯೆಂಜಲ ವೀಳ್ಯೆ ಅವಶ್ಯವಾಗಿ ಬೇಕು. ಆ ಸಾಹಿತ್ಯದ ಹಾಲುಂಡ ಮಕ್ಕಳು —" ಸದಮಲ ಪ್ರತಿಭಾಂಚಿತರ್ ನಮ್ಮ ನಾಡವರ್ " ಎನ್ನುವ ಬಿರುದಿಗೆ ತಕ್ಕವರಾಗಬಲ್ಲರು. "ಹೆಸರಿಲ್ಲದ ಮಾನಿಸರಿಲ್ಲದೆಲ್ಲಿಯುಂ" ಎನಿಸುವ ನಿಜವಾದ ಕನ್ನಡಿಗರು ನಾವಾಗಲು ಗರತಿಯ ಹಾಡು ನಮ್ಮನ್ನು ಪ್ರಚೋದಿಸಬೇಕು.

ಚಿಡಚಣ

೭-೮-೩೫ —ಸಿಂಪಿ ಲಿಂಗಣ

# ಗರತಿಯ ಹಾಡು

## ಪರಂಪರೆ

ಕುಟ್ಟುಬೀಸುವ ಹಾಡು ಯಾವಾಕಿ ಕಲಿಸ್ಯಾಳ ।
ಕೃಷ್ಣನ ತಂಗಿ ಸುಭದ್ರಿ । ಕಲಿಸ್ಯಾಳ ।
ಕೃಷ್ಣನ ಮ್ಯಾಲ ಪದಗೋಳ ॥

ಸುಮ್ಮನೆ ಬೀಸಿದರ ಬೀಳಽದು ಈ ಕಲ್ಲು ।
ನಾಗಸೂರದಂತೆ ದನಿಯೆತ್ತಿ । ಹಾಡಿದರ ।
ಗಮ್ಮನೆ ಬೀಳುವದು ಈ ಕಲ್ಲು ॥

ಪದ ಬಂದರ್ತೇಳು ಬಾರಧಿದ್ದರ ಶರಣಾಗು ।
ಪದವುಂಟು ನನ್ನ ಎದೆಯುಲ್ಲಿ । ತಾಮ್ರದ ।
ತಾಯ್ತುಂಟು ನನ್ನ ತೋಳಲ್ಲಿ ॥

ರಾಗೀಯ ಕಲ್ಲಿಗೆ ರಾಜ್ಯವ ತಿರುಗ್ಯಾರೆ
ರಾಯ ಸಂಪನ್ನರ ಮಗಳಿಗೆ । ನೀಲಮುಗ ।
ರಾಜ್ಯ ತಿರುಗ್ಯಾರೆ ಬಸವಯ್ಯ ॥

ಬೀಸುವ ಕಲ್ಲಿಗೆ ದೇಶವ ತಿರುಗ್ಯಾರೆ
ಸಕಲ ಸಂಪನರ ಮಗಳೀಗೆ । ನೀಲಮುಗೆ ।
ರಾಜ್ಯ ತಿರುಗ್ಯಾರೆ ಬಸವಯ್ಯ ॥

ಅಕ್ಕಿ ಬೀಸುವ ಕಲ್ಲೆ ಸಕ್ಕರೆ ಒಡೆಗಲ್ಲೆ
ಶೆಟ್ಟಿ ತಮ್ಮಯ್ಯನ ಅರಮನೆ । ರಾಗಿಕಲ್ಲೆ ।
ಹಟ್ಟಿ ಬಾಗಿಲಿಗೆ ದನಿದೋರೆ ॥

ರಾಗಿ ಬೀಸುವ ಕಲ್ಲೆ ರಾಜಾನ ಒಡೆಗಲ್ಲೆ ।
ರಾಯ ಅಣ್ಣಯ್ನ ಅರಮನೆ । ರಾಗಿ ಕಲ್ಲೆ ।
ರಾಜಬೀದಿಗೆ ವನಿದೋರೆ ॥

ಕಲ್ಲಮ್ಮ ಮಾತಾಯಿ ಮೆಲ್ಲಮ್ಮ ರಾಗೀಯ ।
ಜಲ್ಲಜಲ್ಲನೆ ಉದುರಮ್ಮ । ನಾ ನಿನಗೆ ।
ನೆಲ್ಲಕ್ಕಿ ಪಡಿಯ ನಡಸೇನು ॥

ಕಲ್ಲವ್ವ ಮಾತಾಯಿ ಮೆಲ್ಲವ್ವ ರಾಜನವ ।
ಜಲ್ಲಜಲ್ಲನೆ ಉದುರವ್ವ । ನಾ ನಿನಗೆ ।
ಬೆಲ್ಲದಾರತಿಯ ಬೆಳಗೇನು ॥

## ಸ್ತುತಿ

ಕೃಷ್ಣ ಕೃಷ್ಣ ಎಂದು ಮತ್ತ ಬೀದಿಗಿ ಬಂದ ।
ಕೃಷ್ಣ ನಮಗೆಲ್ಲಿ ದೊರದಾನ । ಈ ಪರಿ ।
ಎಷ್ಟು ದಿನ ಹೀಂಗ ಕಳೆಯಲಿ ॥

ನಾರಾಯಣಾ ನಿನ್ನ ನಾಮದ ಬೀಜವ ।
ನಾನೆಲ್ಲಿ ಬಿತ್ತಿ ಬೆಳೆಯಲಿ । ನಿನ ನಾಮ ।
ನಾಲೀಗಿ ಮೇಲೆ ಬೆಳೆದೇನೋ ॥

ಇಂದು ನನ್ನಂಗಳ ಶ್ರೀಗಂಧ ನಾತಾವ ।
ಬಂದಿದಾನೇನ ಶ್ರೀ ಹರಿ । ನನ ಮನಿಗ ।
ಗಂಧದ ಮಡುವ ಕಲಕೂತ ॥

ಶಿವ ಶಿವ ಎಂವರ ಸಿಡಿಲೆಲ್ಲ ಬಯಲಾಗಿ ।
ಕಲ್ಲು ಬಂದೆರಗಿ ಕಡೆಗಾಗಿ । ಎಲೆ ಮನವೆ ।
ಶಿವನೆಂಬ ಶಬುದ ಬಿಡಬ್ಯಾಡ ॥

ಮಂದಿ ಮಂದೀಯೆಂದು ಮಂದಿ ನಂಬಲಿ ಹೋದ ।
ಮಂದಿ ಬಿಟ್ಟಾರ ನಡುನೀರ । ಮಲ್ಲಯ್ಯ ।
ತಂದಿ ನನ ಕೈಯ ಬಿಡಬ್ಯಾಡ ॥

ಭಂತ್ನಾಳ ಶರಣಯ್ಯ ನಾ ನಿನ್ನ ಮಗಳಯ್ಯ ।
ಲೇಸಗಿತ್ತಯ್ಯ ಬಡವೆಯ್ಯ । ನನ ಮ್ಯಾಲ ।
ಸಾಸ್ವಿಕಾಳಟ್ಟು ದಯವಿರಲಿ ॥

ಮೂಲಕ್ಕಿ ತಂದೀದ ಏಳಪ್ಪ ಬಲಭೀಮ ।
ಮೂಲಕ್ಕಿ ಒಳಗ ಎಳಿನಾಮ । ತಂದೀದ ।
ಏಳೊ ನಿಮ್ಮುರಗಿ ಬಲಭೀಮ ॥

ಸತ್ಯವಂತರೆಂದು ಶರಣ ಮಾಡಲಿ ಹೋದ ।
ಮತ್ಯಾಕ ಮಾರಿ ತಿರುವ್ಯಾರ । ಬಸವಣ್ಣ ।
ಮುತ್ತು ತಂದೀದ ಮಗಡಾಕ ॥

ಸೊಲ್ಲಾಪುರದ ಒಳಗ ಸೆಲ್ಲೆಲ್ಲ ಮಲ್ಲೀಗಿ ।
ಹಾಸುಮಂಚೆಲ್ಲ ಹವಳವ । ಸಿದರಾಮನ ।
ದಂಡುಕೋಲೆಲ್ಲ ದವನವ ॥

ಆಕಾಶದಡವ್ಯಾಗ ಧೂಪದ ಹೊಗೆಯೆದ್ದು ।
ಆಯ್ತು ಮಲ್ಲಯ್ಯನ ಶಿವಪೂಜಿ । ಆಗಾಗ ।
ಆಕಾಶದ ಘಂಟಿ ಘಳಲೆಂದು ॥

ಎಲ್ಲೆಲ್ಲಿ ನೋಡಿದರ ಥಳ್ಳ್ಯಾನ ಕಲ್ಲಿಲ್ಲ ।
ಜಳ್ಳ್ಯಾನೆ ಹರಿವ ಜಲವಿಲ್ಲ । ಲಿಂಗಯ್ಯನ ।
ವಸ್ತ್ರ ನಾನೆಲ್ಲಿ ಒಗೆಯಲೆ ॥

ಮೂಗಿನಾಗ ಮೂಗುತಿ ನಕ್ಕರೆ ಕರಿಕಲ್ಲು ।
ಅಕ್ಕ ನೀನ್ಯಾರ ಮಗಳವ್ವಾ । ಹಲಸಂಗಿ ।
ಗಚ್ಚೀನ ಗುಡಿಯ ಜಕ್ಕವ್ವ ॥

ನಿದ್ದಿಗಣ್ಣಲಿ ಕಂಡ ಸುದ್ದ ಗುರುವಿನ ಪಾದ ।
ಎದ್ದು ನೋಡಿದರ ನಿರಬಯಲು । ಗುರುರಾಯ ।
ರುದ್ದರನ ಮಹಿಮೆ ತಿಳಿಯಾವ ॥

ಪಲ್ಲಕ್ಕಿ ಹೊತ್ತಾಗ ಮೆಲ್ಲಕ ನಡಿಯೆಂದ ।
ಪಲ್ಲಕ್ಕ್ಯಾನ ಗೊಂಡೆ ಅದರ್ಯಾವ । ಭೀಮನ ।
ಅರಳೆಲಿ ಮುತ್ತು ಉದುರ್ಯಾವ ॥

ಥಂಬ ಮುಸಳಿ ಮುಂದ ಥೆಂದವ್ವ ಸಾಲುಟಗಿ ।
ಜಂಬ ಹೊಯ್ದಾವ ಎಳೆಹುಣಚಿ । ಬನದಾಗ ।
ತಂದಿ ಶಿವಯೋಗಿ ನೆನೆದಾನ ॥

ಕಣಬಟ್ಟ ಕೋಮ್ರೀಸಿ ಕಂಡರಂಜಿಕಿ ಬರುವ ।
ಮುಂಜಾನದಾಗ ನೆನೆದಾರ । ವೀರಭದ್ರ ।
ತುಂಬಿದಾರೂತಿ ತರುವೇನ ॥

ಗುಡ್ಡದ ವಾರ್ಯಾಗ ಗುಲಗಂಜಿ ಬನದಾಗ ।
ಒಬ್ಬನ ಹ್ಯಾಂಗಿದ್ದಿ ಧರಿಧೂಳ । ನಿನ ಮುಂದ ।
ಅಬ್ಬರಿಸಿ ಗಂಗಿ ಹರಿದಾಳ ॥

ಶರಣರ ನೆನೆದರ ಸರಿಗೀಯ ಇಟ್ಟಂಗ ।
ಹವಳ ಮಲ್ಲಿಗಿ ಮುಡಿದಂಗ । ಕಲ್ಯಾಣ ।
ಶರಣರ ನೆನೆಯೊ ನನ ಮನವೆ ॥

ಮುಂದೇನು ಕೊಟ್ಟೀತ ಮನವೇನು ದಣಿದೀತ ।
ಮುಂಜಾನದಾಗ ಗಿರಿಮಲ್ಲ । ಕೊಟ್ಟರ ।
ಮನಿ ತುಂಬಿ ನಮ್ಮ ಮನ ತುಂಬಿ ॥

ಮಾದೇವ ನಿನ ಹೊರತು ನಾನ್ಯಾರ ನಂಬಿಲ್ಲ ।
ನಾ ಮಾಡೆನೆಂಬ ಅಳವಿಲ್ಲ । ಮಲ್ಲಯ್ಯ ।
ನೀ ನಡಿಸು ನನ್ನ ಸರುವೆಲ್ಲ ॥

ಅಕ್ಕಿಪೂಜಿಯ ಮಾಡೊ ಕಪ್ಪುರದ ಬೆಳಕೀಲಿ ।
ಅಪ್ಪ ಮಲ್ಲಯ್ಯ ಕಿರಿ ಬೆವತ । ನನ ತಮ್ಮ ।
ಎತ್ತರಿಸಿ ಬೀಸೋ ಚವುರವ ॥

ಕರುಣ ಬಂದರ ಕಾಯೊ ಮರಣ ಬಂದರ ಒಯ್ಯೊ ।
ಕರುಣಿ ಕಲ್ಯಾಣ ಬಸವಣ್ಣ । ಕಾಸಿಲಿಂಗ ।
ಕಡೆತನ ಕಾಯೊ ಅಭಿಮಾನ ॥

ತಾಯವ್ವನ ನೆನೆಯೂದು ಯಾಯಾಳಿ ಯಾಪೊತ್ತ ।
ಊರೆಲ್ಲ ಉಂಡು ಮನಗಾನ । ಬೆಳಚಿಕ್ಕ ।
ಹೊಂಡಾಗ ಅವಳ ನೆನೆದೇನ ॥

ಆರೂತಿ ಹಿಡಕೊಂಡು ಆರ್ಯಾಣ ತಿರಗೀದ ।
ದೇವರಿಲ್ಲೇನ ಗುಡಿಯಾಗ । ಲಿಂಗಯ್ಯಾ ।
ಮಾಯವಿಲ್ಲೇನು ನನ ಮ್ಯಾಲ ॥

ಹೂವಿನಾಗ ಹುದುಗ್ಯಾನ ಮಾಲ್ಯಾಗ ಮಲಗ್ಯಾನ ।
ಮೊಗ್ಗ್ಯಾಗ ಕಣ್ಣು ತೆರೆದಾನ । ಲಿಂಗಯ್ಯನ ।
ನೋಟಪಟಿಗೆ ನಿದ್ದಿ ಬಯಲಾಗಿ ॥

ಬಿತ್ತೀದ ಹೊಲದಾಗ ಒತ್ತಿ ಹಾಯಕಿ ಯಾರ ।
ಮುತ್ತಿನುಡಿಯಕ್ಕಿ ಬನದಮ್ಮ । ಹಾಯ್ಪುರ ।
ಬಿಚ್ಚಿಬಿದ್ದಾವ ಬಿಳಿಜೋಳ ॥

ಪಾದತೀರ್ಥವ ಸಲಿಸಿ ಪಾವನಾಯಿತ ಜನ್ಮ ।
ರೋಮರೋಮೆಲ್ಲ ರವಿಚಿನ್ನ । ಗುರು ನಿಮ್ಮ ।
ಪಾದದಲಿ ಕಂಡೆ ಪದಿಗೋಳು ॥

ಕೂಡಲ ಸಂಗಯ್ಯ ಹೊಳೆಯಾಗ ಹ್ಯಾಂಗಿದ್ದಿ
ಹಳ್ಳೊತ್ತಿ ಸಣ್ಣ ಮಳಲೊತ್ತಿ । ಗಂಗೀಯ ।
ನೀರ್ಯೊತ್ತಿ ಲಿಂಗ ನೆನದಾನ ॥

ಹೋಗಾಗ ಭಡಕಾದಾ ಬರುವಾಗ ಬಲಕಾದಾ ।
ಈಗ ನನ ಕೊಡಕ ಇದಿರಾದಾ । ಬಲಭೀಮ ।
ಕೊಡ ಹೊತ್ತು ಕೈಯ ಮುಗಿದೇನ ॥

ಉಮದೀಯ ಮಲಕಾರಿ ಉಂಡು ಹೊರಿಯಾಕ ಬಾಪ ।
ಬಂಗಾರ ಬಿಸಿಲ ಬಡೆದಾವ । ಬಬಲಾದಿ ।
ಕೊಂತೆವ್ವ ಸೆರಗ ಮರೆಮಾಡ ॥

ಹಾಸಗಲ್ಲಿನ ಮ್ಯಾಲ ಹಾಯ್ದು ಹೋದವನ್ಯಾರ ।
ಪಾದ ಮೂಡ್ಯಾವ ಪರಿಪರಿ । ಬಲಭೀಮ ।
ಹಾಯ್ದು ಹೋಗ್ಯಾನ ಜಳಕಕ ॥

ಪರವುತಕ ಹೋಗ್ಯಾಳ ಪಾತಾಳ ಗಂಗೆವ್ವ ।
ಯಾತ ಪಚ್ಚಿದರ ಸವಿಯಳ । ಮಲ್ಲಯ್ಯನ ।
ಯಾತರಿಗೆ ಹೋಗಿ ಮಲೆತಾಳ ॥

ಕಸವು ಹೊಡೆದ ಕೈಯು ಕಸ್ತೂರಿ ನಾತಾಪ ।
ಬಸವಣ್ಣ ನಿನ್ನ ಸೆಗಣೀಯ । ಬಳಿದ ಕೈ ।
ಎಸಳ ಯಾಲಕ್ಕಿ ಗೊನಿನಾತ ॥

ಪಾರೀಸನಾಥಗ ಪಾರಿಜಾತದ ಹೂವ ।
ಪಾರೀಸನ ತಂಗಿ ಪದಮೌಗ । ಖಳವೇನ ।
ಕೊಯ್ದು ಮಲ್ಲೀಗಿ ನನೆದಂಡಿ ॥

ಚೆಂದ ಚೆಂದದ ಗುಡ್ಡ ಮುಂದ ಜೋಗುಳ ಭಾವಿ ।
ಮುನ್ನೂರರವತ್ತು ಎಳೆಮಾವ । ಬನದಾಗ ।
ರಂಭಿ ಸತ್ತೆವ್ವ ನೆನೆದಾಳ ॥

ಯಾರಾಸಿ ನನಗಿಲ್ಲ ಭಾಗ್ಯದ ಬಲವಿಲ್ಲ ।
ಕಲ್ಲೊಳ್ಳಿ ಊರ ಕರಿರಂಗ । ವೆಂಕೋಬ ।
ನಿನ್ನಾಸೆ ನನಗ ಅನುಗಾಲ ॥

ತುಂಬಿದ ಹೊಳಿಯಾಗ ಕೊಂಬು ಕಾಣಿಸತಾವ ।
ಇಂಬುಳ್ಳ ಇಣಿಯಾ ಬಸವಣ್ಣ । ಬರುವಾಗ ।
ಗಂಗೆದ್ದು ಕೈಯ ಮುಗಿದಾಳ ॥

ಹಾವಲ್ಲ ಕೆಸರಾಗಿ ಹಾಯ್ದಲ್ಲಂ ಬಸವಣ್ಣ ।
ಹಾಕೊಂದು ವಜ್ರದ ಹಲಗೆಯ । ನಂ ಬಸವ ।
ಬೀಸೆಂದ ಬೆಳ್ಳಿಯ ಚೌರವ ॥

ಹಾದಿಯ ಹೊಲ ನೋಡೊ ಗೋದಿಯ ಬೆಳೆ ನೋಡೊ ।
ಹಾದಹೋಗವನ ನಗಿ ನೋಡೋ । ನಂ ಬಸವ ।
ಆರಾಮ ನೋಡೊ ಅಡಿವ್ಯಾಗ ॥

ಶರಣು ಶರಣೆಂಬೆವು ಹರಣ ಹಾರುವತನಕ ।
ಕರುಣೆಸಿರಿ ಶರಣ ಬೊಮ್ಮಯ್ಯ । ನಮಗಿನ್ನು ।
ತರಸರಿ ಹುಲುಸು ಹುಲ್ಲುಲ್ಲಿಗೆ ॥

ಸುಂಕರಾಶಿಯ ಕಣಕೆ ಸಂಕದೇವನ ಬಲವು ।
ಕಂಕಿಯಾ ಕಣಕೆ ನಿನ ಬಲವು । ಮಾದೇವಿ ।
ಸೊಂಕಿದರೆ ರಾಶಿ ಕಣತುಂಬಿ ॥

ಬೂದನಿಗೆ ಬಾಸಿಂಗ ಭೂಮಿತಾಯಿಗೆ ದಂಡೆ ।
ಸಾಲ ಶರಣರಿಗೆ ಸರಮಾಲೆ । ಕಟಗೊಂಡು ।
ಮಾದಯ್ಯ ಗೆದ್ದ ಕೈಲಾಸ ॥

ಸುರವೀಗಿ ನೆನಿಬೇಕ ಪಾರ್ವತಿಪತಿಯನ್ನ ।
ಮಗರಾಮನಾದ ಗಣಪನ್ನ । ನೆನಿದರ ।
ಬರುವಂಥ ವಿಘ್ನ ಬಟಬಯಲ ॥

ಸಂಗಯ್ಯನಿರುವದು ಸಣ್ಣ ಉಪ್ಪಲದಿನ್ನಿ ।
ಸಂಗಯ್ಯನ ತಮ್ಮ ಗಿರಿಮಲ್ಲ । ನಿರುವದು ।
ತಿಂಗಳ ದಾರಿ ಪರವೂತ ॥

ಮಲ್ಲಯ್ಯ ನಿರುವದು ಮರದ ಮಂಜಣದಾಗ ।
ಮಲ್ಲಯ್ಯನ ತಂಗಿ ಬವರಮ್ಮ । ನಿರುವದು ।
ತಾಡಪತ್ರಿಯ ಬನದಾಗ ।

ಅಕ್ಕ ನೋಡುನು ಬಾರ ಹೊಕ್ಕು ಸೀತೀವನಿಯ ।
ಚಿಕ್ಕ ರುಂಬಾಲದ ಧರಮರ । ಮಣಿಮ್ಯಾಗ ।
ಪಕ್ಕಿ ಕಾಲಾಟ ಹರಿನಾಮ ॥

ಆ ಕಲ್ಲ ಈ ಕಲ್ಲ ಹಸಿರು ಹಳದಿಯ ಕಲ್ಲ ।
ಹೆಸರಾದ ಕಲ್ಲ ಕೊಡೆಕಲ್ಲ । ಬಸವಗ ।
ಹಸಿರು ಗಲ್ಲೀಪ ಹೊಲಿಸೀನ ॥

ಮುತ್ತೀನ ಮೂಗುತಿ ಮುತ್ಯಾ ಮಾಡಿಸಿಕೊಟ್ಟ ।
ಮುತ್ತೈದಿತನವ ಶಿವ ಕೊಟ್ಟ । ಮೇಲಿರುವ ।
ಮುಕ್ಕಣ್ಣ ಕೊಟ್ಟ ಮಕ್ಕಳನ ॥

ಬಿಜ್ಜರಗಿ ಊರಾಗ ಭೂತಾಳಸಿದ್ದಯ್ಯ ।
ಗುಜ್ಜಿ ನನ ಮಗಳ ಮರಿಬ್ಯಾಡ । ಸಿದ್ದಯ್ಯ ।
ಬಿಳ್ಳೊಲದ ಬನದಾಗ ನೆನೆದಾನ ॥

ಬಂಥನಾಳ ಸಂಗಯ್ಯನ ಬಹುಮುಂದಿ ನೆನೆದಾರ
ಬೇಡಿsದ ವರವ ನೀಡ್ಯಾನ । ಸಂಗಯ್ಯ ।
ಬಡವರ ಕೈಯ ಬಿಡಲಾರ ॥

ಕಲ್ಲೀಗಿ ಮುಕ್ಯಾಕಿ ಎಲ್ಲ ದೇವರ ನೆನೆದೆ ।
ಅಕ್ಕಮಹಾದೇವಿಯ ಅರಸರ । ಮಲ್ಲಯ್ಯನ ।
ಮುಕ್ಯಾಕು ಮೊದಲೆ ನೆನೆದೇನ ॥

ತಾಯಿsಯ ನೆನೆದರೆ ಬೇಗನೆ ಪದ ಬರಲಿ ।
ತಾಯವ್ವ ಗಂಗೆ ದಡದಲ್ಲಿ । ಸರಸ್ವsತಿ ।
ಕಾಯ ಕುಂಡ್ಹೋಗಿ ಕರದಲ್ಲಿ ॥

ಅಕ್ಕನ ನೆನೆದರೆ ಗಕ್ಕನೆ ಪದ ಬರಲಿ ।
ಅಕ್ಕವ್ವ ಗಂಗೆ ದಡದಲ್ಲಿ । ಸರಸೋತಿ ।
ಅಕ್ಕಿ ಹೂದವಳಾ ಕರೆತನ್ನಿ ॥

ಹಳ್ಳಕೊಳ್ಳದಲ್ಲಿ ಮಳ್ಳಾಜಿ ಬನದಲ್ಲಿ ।
ಒಳ್ಳೆವಳು ನಿನ್ನ ಅರಸಿಽದೆ । ಸರಸ್ವೋತಿ ।
ಎಲ್ಲಿ ಹೋದೆವ್ವ ಪದ ಬರಲಿ ॥

ಅಟ್ಟ ಬೆಟ್ಟದಲ್ಲಿ ಪುಟ್ಟಾಜಿ ಬನದಲ್ಲಿ ।
ಸೆಟೆಯುವಳೆ ನಿನ್ನ ಅರಸಿದೆ । ಸರಸೋತಿ ।
ಎತ್ತ ಹೋದೆವ್ವ ಪದ ಬರಲಿ ॥

ತಾಯಿ ಸರಸತಿ ಬಾಗಿಲಲ್ಲಿ ಯಾಕೆ ನಿಂದೆ ।
ತೋರೇನು ಬಾರೆ ನಿನಗಿಂಬ । ನಮ್ಮಾನೆ
ಸಾಲು ಮಂಚದ್ಲೆ ಒರಗವ್ವ ॥

ಅಕ್ಕಾ ಸರಸ್ವತಿ ಹಟ್ಟೇಲ್ಯಾಕೆ ನಿಂತೆ ।
ಕೊಟ್ಟೇನು ಬಾರೆ ನಿನಗಿಂಬ । ನಮ್ಮಾನೆ
ಪಟ್ಟೆಮಂಚದ್ಲೆ ಒರಗಮ್ಮ ॥

ಅಗ್ಗಿಯ ಬುಡದಲಿ ಸೊಗಸು ಮಾಡುವ ಹೆಣ್ಣೆ ।
ಅವಸರದಲ್ಬಂದೆ ನಿನ ಬಳಿಗೆ । ಸರಸ್ವೋತಿ ।
ಕೆಲಸ ಬಿಟ್ಟಾಡ ಕಲಿಸವ್ವ ॥

ನಗ್ಗಾಲ ಮರದಡಿ ನಿದ್ರೆ ಮಾಡೋದ ಬಿಟ್ಟು ।
ಎಗ್ಗಿಲ್ದೆ ಬಂದೆ ನಿನ ಬಳಿಗೆ । ಸರಸೋತಿ ।
ಚೆಂದುಳ್ಳ ಹಾಡ ಕಲಿಸವ್ವ ॥

ಬಿಳಿಗಿರಿ ರಂಗಯ್ಯ ಬಿಳಿಯ ತೇಜಿಯನೇರಿ ।
ಬೆಳಗಾನ ಬೇಟೆ ಹೊರಟಾರೊ । ಕತ್ತಿಯ ।
ಹೊಳಪಲ್ಲಿ ಮುಖವ ತೊಳೆದಾರೋ ॥

ಎತ್ತಲಾರದ ಶಂಖು ಹೆಗಲಲ್ಲಿ ರಾಂಭಾಣ ।
ಎತ್ತಾರೆ ಹೊರಟಿರಿ ಹೊರಪಯಣ । ರಂಗಯ್ಯ ।
ಬಡವರ ಮನೆಯ ಹರಿಸೇವೆ ॥

ಬೆಟ್ಟದ ಬಿದಿರೀ ಹಟ್ಟೀಗೆ ಸೆರಳಾದೆ ।
ಜಾಣ ರಂಗಯ್ಗೆ ಕೊಳಲಾದೆ । ಸಿರಿಬಿದಿರೆ ।
ಮುತ್ತು ಕೇರಾಕೆ ಮೊರನಾದೆ ॥

ಹೊತ್ತು ಮೂಡುವ ಮುಂಚೆ ಮಿತ್ರೇರೇಳುವ ಮುಂಚೆ ।
ಮಸ್ಥಾವಿಕನ ಪೆಟ್ಗೆ ಬಲಗೈಲಿ । ಹಿಡಕೊಂಡು ।
ಮಿತ್ರೇರಗ್ನಿಗೆ ಹೊರಟಾರೊ ॥

ಅಚ್ಚ ತುಳಸೀದಂಡೆ ನಿಚ್ಚ ನೀಲೀ ನಾಮ ।
ಪಕ್ಷಿಯ ಮೇಲೆ ಮೆರೆಯುವರೇ । ರಂಗಯ್ಗೆ ।
ಲಕ್ಷ್ಮಿ ಆರತಿ ಹಿಡಿದಾಳೋ ॥

ಹಣ್ಣುಕಾಯಿ ಪೂಜೆ ಚಿನ್ನದ್ಹಾಲಿಯಾವನೆ ।
ಬರಲಾರೆ ನಿಮ್ಮ ಏಳ್ಮಲೆಗೆ । ಮಾದೇವ ।
ಒಪ್ಪಿಸಿಕೊಳ್ಳಿ ಹರಕೀಯ ॥

ಹರಕೆಯ ಒಪ್ಪುವಾರೆ ಚಿಕ್ಕವ್ವ ಮಗಳಲ್ಲ ।
ಬಳಸಿ ಬಾರವ್ವ ಪ್ರಾಕಾರ । ಬರದಿದ್ರೆ ।
ಮಾದೇವ ನಿನಗೆ ಮುನಿಯಾವ ॥

ಸರ್ಪನಾ ದಾರೀಲಿ ಸಂಜೇನು ನಾ ಬಳಸಿ ।
ನೆಪ್ಪಿಲ್ದೆ ಮಲೆಗೆ ಬರಬಹುದೆ । ಏಳು ಮಲೆ ।
ನೆಪ್ಪ ತೋರ್ಯಾವ ಹುಲಿಕರಡಿ ॥

ಮಾದಯ್ಯ ಬರುವಾಗ ಮಾಳೆಲ್ಲ ಘಮ್ಮೆಂದೊ ।
ಮಾಳದಲಿ ಗರಿಕೆ ಚಿಗುರ್ಯಾವ । ಮಾದೇವ ।
ಮೂಡ್ಲಲ್ಲಿ ಮಳೆಯ್ಯುಸುರಿದಾವೊ ॥

ಪಟ್ಟೆರುಮಾಲ ಯಾವ ಐಗಳ್ಗೆ ಅಮರಿವೋ ।
ಬಟ್ಟೋರಿ ಮೇಲೆ ಬರುವೋರು । ಮಾದೆವಗೆ ।
ಪಟ್ಟೆ ರುಮಾಲು ಅಮರೀವೋ ॥

ಕರಡೀನ ಕಲ್ಮಾಡಿ ಹುಲಿಯ ಹುತ್ತಾ ಮಾಡಿ ।
ಮಡಗಿದ್ದ ಬೆತ್ತ ಮರಿಮಾಡಿ । ಮಾದೇವ ।
ಹೊರಟಾನು ಜೇನು ಮಲೆಗಾಗಿ ॥

ಹೊತ್ತು ಮುಳುಗಿದರೇನು ಕತ್ತಲಾದರೇನು ।
ಅಪ್ಪ ನಿನ ಗುಡಿಗೆ ಬರುವೇನೊ । ಮಾದಯ್ಯ ।
ಮುತ್ತೀನ ಬಾಗಿಲು ತೆರೆದೀರೋ ॥

ರಂಗನ್ನ ನೋಡೋಕೆ ರೇಕು ಮಾಣಿಕವೇಕೆ ।
ಅಂಗಯ್ಯ ತುಂಬ ಹಣವೇಕೆ । ಬೇಟ್ಗಾರ ।
ಸಿಂಗರದ ರಂಗ್ನ ನೋಡೋಕೆ ॥

ರಂಗ ಬರ್ತಾನೆಂದು ರಂಗೋಲಿ ನಾ ಹೊಯ್ದೆ ।
ರಂಗನ ಹಿಂದೆ ರಮಣಿಯರು । ಬರ್ತಾರೆಂದು ।
ಮಂಗಳಾರತಿ ನಾ ತಂದೆ ॥

ಹಾರನಹಳ್ಳಿಯ ಕೆರೇಲಿ ಇರುವವನೆ ।
ನಾರಿಯ ಮಗನೆ ಬೆನವಣ್ಣ । ಬೆಳ್ಳಿದೇವ ।
ಭಾರಾದ ಪದನ ಬರಕೊಡೋ ॥

ಬಾಣಾವರದ ಬಾಗಿಲಲ್ಲಿರುವವನೆ ।
ಬಾಲೆಯ ಮಗನೆ ಬೆನವಣ್ಣ । ಬೆಳ್ಳಿದೇವ ।
ಮೇಲಾದ ಪದಗಳ ಬರಕೊಡೋ ॥

ಹೆಬ್ಬಾಕಲಲ್ಲಿರುವ ಕಬ್ಬಲ್ಲ ಬೆನವಗೆ ।
ಕಬ್ಬಿನ ಜಲ್ಲೆ ನೆನೆಗಡಲೆ । ಸಲಿಸುವೆ ।
ಕಬ್ಬಲ್ಲ ಬೆನಪ ಕೊಡು ಮತಿಯ ॥

ಎಲ್ಲ ಕೊಂಬಾಗಿರುವ ದೊಳ್‌ಹೊಟ್ಟೆ ಬೆನವಣ್ಣ ।
ಎಳ್ಳಲಿ ತುಪ್ಪ ತಿಳಿದುಪ್ಪ । ಸಲಿಸುವೆ ।
ದೊಳ್‌ಹೊಟ್ಟೆ, ಬೆನವ ಕೊಡು ಮತಿಯ ॥

ಎದ್ದೊನೆ ನಿಮ ಧ್ಯಾನ ಏಳುತಲೆ ನಿಮ ಧ್ಯಾನ ।
ಸಿದ್ಧರ ಧ್ಯಾನ ಶಿವಧ್ಯಾನ । ಮಾ ಶಿವನೆ ।
ನಿದ್ದೆಗಣ್ಣಾಗೆ ನಿಮ ಧ್ಯಾನ ॥

ಶಿವನೇ ಗುರುವೆಂದು ಹಿಡಿದೆನು ರಾಗಿಕಲ್ಲ ।
ಶಿವನೇ ಕೊಡು ನಮಗೆ ಮತಿಗಳ । ಸಂಗನಬಸವ ।
ಗುರುವೇ ಕೊಡು ನಮಗೆ ಸುಖಗಳ ॥

ಆರಲಿ ಮಾವಿನ ಬೇರಾಗೆ ಇರುವೋಳೆ ।
ವಾಲಗದ ಸದ್ದಿಗೆ ಒದಗೋಳೆ । ಸರಸತಿಯೆ ।
ನಾಲಗೆ ತೊಡರ ಬಿಡಿಸಮ್ಮ ॥

ಎಂಟೆಲೆ ಮಾವಿನ ದಂಟಾಗೆ ಇರುವೋಳೆ ।
ಗಂಟೆಸದ್ದಿಗೆ ಒದಗೋಳೆ । ಸರಸತಿಯ ।
ಗಂಟಲ ತೊಡರ ಬಿಡಿಸಮ್ಮ ॥

ರಾಮಲಕ್ಷ್ಮಣನೆ ಸೀತೆಯ ತಂದೋನೆ ।
ರಾಮರ ಬಂಟ ಹನುಮಂತ । ಶರಣೆಂಬೆ ।
ಜಯಜಯರಾಮ ಕರುಣಿಸೋ ॥

ಅಕ್ಕಿ ಒರಳಿಗೆ ಹುಯ್ದು ಅಪ್ಪ ನಿಮ್ಮ ನೆನೆದೆನು ।
ಅಕ್ಕಮಾದೇವಿ ಗಿರಿಜೆಯ । ಕಂಚವ್ವನ ।
ಮಕ್ಕಳೈವರ ನೆನೆದೆನು ॥

ಶರಣೆಂದೆ ಶಿವನಿಗೆ ಶರಣೆಂದೆ ಗುರುವಿಗೆ ।
ಶರಣೆಂದು ಶಿವನ ಮಡದಿಗೆ । ಗೌರಮಗೆ ।
ಶರಣೆಂದು ಕಲ್ಲು ಹಿಡಿದೆನು ॥

ಏಳುತಲೆ ಎದ್ದು ಯಾರ್ಯಾರ ನೆನೆಯಲಿ ।
ಎಳ್ಳು ಜೀರಿಗೆ ಬೆಳೆಯೋಳೆ । ಭೂಮಿತಾಯಿ ।
ಎದ್ದೊಂದು ಗಳಿಗೆ ನೆನೆವೇನು ॥

ಉತ್ತು ಬಂದಣ್ಣ ಮುತ್ತಿನ್ಕಂಭ ಸೇರಿ ।
ಉತ್ತು ಬಂದೆ ಶಿವನೆ ಮಳೆಯಿಲ್ಲ । ಎಂದರೆ ।
ಮುತ್ತಿನ ಮಂಜು ಹರಿದಾವು ॥

ಅಂಬು ಕೊಡುವವನೆ ಗೊಂಬೆಹಚ್ಚಡದವನೆ ।
ರಂಭೆ ತೊಡೆಯ ಮೇಲಿರುವ । ಮಳೆದೇವ ।
ಅಂಬರದಿಂದ ಕರುಣಿಸು ॥

ಊರಿಗೆ ಮಳೆ ಹೋದೊ ಏರು ಕಟ್ಟೊ ಕಂದಯ್ಯ ।
ಊರ ಮುಂದಿನ ಬಸವಣ್ಣಗ । ಕೈಮುಗಿದು ।
ಏರು ಕಟ್ಟೊ ಮುದ್ದು ಮುಖದವನೇ ॥

ಎತ್ತು ಎನಬಹುದೆ ಎಡಚೋರಿ ಬಸವನ ।
ಸುತ್ತೇಳು ಲೋಕ ಸಲಹೋನ । ಬಸವನ।
ಸತ್ವ ಮೆರೆಯುವುದ ಧರೆಯಲ್ಲಿ ॥

## ತವರುಮನೆ-ತಾಯ್ತಂದೆ

ತಾವರಿಯ ಗಿಡ ಹುಟ್ಟಿ ದೇವರಿಗೆ ನೆರಳಾದಿ ।
ನಾ ಹುಟ್ಟಿ ಮನೆಗೆ ಎರವಾದೆ । ಹಡವ್ವ ।
ನೀ ಕೊಟ್ಟ ಮನೆಗೆ ಹೆಸರಾದೆ ॥

ಗರತಿ ಹೊಟ್ಟೆಲಿ ಹುಟ್ಟಿ ಆರತಿ ಕಾಣಲಿಲ್ಲ ।
ಜರತಾರಿ ಸೀರಿ ಉಡಲಿಲ್ಲ । ಹಡದವ್ವ ।
ವ್ಯರ್ಥವಾದಾವ ಮೊಲೆಹಾಲ ॥

ಬ್ಯಾಸಗಿ ದಿವಸಕ ಬೇವಿನ ಮರ ತಂಪ ।
ಭೀಮರತಿಯೆಂಬ ಹೊಳಿ ತಂಪ । ಹಡಮ್ಮ ।
ನೀ ತಂಪ ನನ್ನ ತವರೀಗಿ ॥

ಹಲ್ಲು ಸುಲಿಯಲಿ ಬೇಕು ವೀಳ್ಯ ಮೆಲಿಯಲಿ ಬೇಕು ।
ಮಲ್ಲೀಗಿ ಬೇಕು ತುರಬೀಗಿ । ಹಡದಮ್ಮ ।
ನೀ ಬೇಕು ನನ್ನ ತವರೀಗಿ ॥

ತಾಯಿಮಕ್ಕಳ ಝಗಳ ನ್ಯಾಯ ಮಾಡವರ‍್ಯಾರ ।
ವಾಲೀಗಿ ಮುತ್ತ ವಜನೇನ । ಹಡದಮ್ಮ ।
ನಾ ಆಡಿದ ಮಾತು ನಿಜವೇನ ॥

ರಾಗೀಯ ಒಣರೊಟ್ಟಿ ರಾಜಗೋಳಿಯ ಪಲ್ಲಿ ।
ರಾಜಕ ತವರು ಬಡವರ । ಮನಿಯಾಗ ।
ನಾಕು ದಿನವಿದ್ದು ಬರುವೇನ ॥

ಅಕ್ಕ ಇದ್ದರೆ ಭಾವ ರೊಕ್ಕ ಇದ್ದರೆ ಸಂತೆ ।
ಮಕ್ಕಳಿದ್ದರೆ ಮನಿಮಾರ । ಹಡೆದವ್ವ ।
ನೀ ಇದ್ದರೆ ನಮಗ ಸಂಮರಾಜ್ಯ ॥

ತಾಯವ್ವ ನಿನ ಮುಂದ ತಾರಿಪೇನ್ಹೇಳಲಿ ।
ತಾಯಿ ನನ ಜೀವ ಸೊಗಸಿಲ್ಲ । ಬಾಳೀಯ ।
ಹಣಗ್ಯಾಗ ಹಣ್ಣ ಕಳತಂಗ ॥

ಹೆಣ್ಣು ಮಕ್ಕಳ ನ್ಯಾಯ ಉಣ್ಣೊಲ್ದೆ ಮಾಡ್ಯಾನ ।
ಪುಣ್ಯಳ್ಳ ಧೊರೆಯು ಹಡೆದಪ್ಪ । ನಿದರೀಗಿ ।
ಹೊನ್ನಿನ ಮಳೆಯು ಸುರಿಯಾಲೆ ॥

ಹೆಣ್ಣುಮಕ್ಕಳ ಖಳುವಿ ಕಣ್ಣೀಗಿ ನೀರ ತಂದು ।
ಸಣ್ಣಸೆಲ್ಲೆದಲೆ ಮುಸುಕ್ಹಾಕಿ । ಹಡೆದಪ್ಪ ।
ಹೆಣ್ಣು ಸಾಕೆಂದ ಜಲುಮಾಕ ॥

## ತವರುಮನೆ-ತಾಯ್ತಂದ

ಹೆಣ್ಣು ಹಡೆಯಲಿ ಬ್ಯಾಡ ಹೆರವರಿಗಿ ಕೊಡಬ್ಯಾಡ ।
ಹೆಣ್ಣು ಹೋಗಾಗ ಅಳಬ್ಯಾಡ । ಹಡದವ್ವ ।
ಸಿಟ್ಟಾಗಿ ಶಿವಗ ಬೈಬ್ಯಾಡ ॥

ಸೋದರಮಾವೇನ ಸೂರ್ಯಚಂದ್ರಾಮೇನ ।
ಬೆಳದಿಂಗಳೇನ ಬಿಸಿಲೇನ । ಹಡೆದವ್ವ ।
ತಾಯಿ ನಿನ್ನಣ್ಣ ಹೌದೇನ ॥

ಕಡಗ ಇಲ್ಲದ ಕೈಯ ಕರುಣ ಇಲ್ಲದ ಪುರುಷ ।
ಹಡೆದವ್ವನಿಲ್ದ ತವರೀಗಿ । ಹೋದಾರ ।
ಅಡವ್ಯಾಗ ವಸ್ತಿ ಇಳಿದಾಂಗ ॥

ತವರ ಮನಿಯಾ ದೀಪ ತೆವರೇರಿ ನೋಡೇನ ।
ಹತ್ತು ಬಳ್ಹಚ್ಚಿ ಶರಣೆಂದ । ತಮ್ಮದೇರು ।
ಜಯವಂತರಾಗಿ ಇರಲೆಂದ ॥

ಅರಗಿನಂಥ ತಾಯಿ ಮರದಂಥ ಮಕ್ಕಳು ।
ಕರಗಿದರ ಬೆಣ್ಣಿ ತಿಳಿತುಪ್ಪ । ದೇಥಕಿ ।
ಕರಗಂಥ ತಾಯಿ ಇರಬೇಕ ॥

ಹಡೆದ ತಾಯಿಯ ಮುಂದ ಹಾಲು ಕುಡಿದರ ಛಂದ ।
ಮಲತಾಯ ಮುಂದ ಮರಿಗುದರಿ । ಏರದಿರ ।
ಮನದಾಗ ಚಿಟಗಿ ಮುರಿದಾಳ ॥

ಭಂಗಾರ ಬಳೆಯುವರು ತಿಂಗಳ ಹಾದವರು ।
ನನ್ನ ಕೊಟ್ಯಾಕ ಮರತಾರ । ಮಾವೀನ ।
ಹಣ್ಣು ಉಣುವಾಗ ನೆನಸ್ಯಾರ ॥

ಸಾವಿರಕ ಸತ್ಯರು ನೂರಕ ಧರ್ಮರು ।
ಆಗ ಬಿತ್ತ್ಯಾಗ ಬೆಳದಾರ । ನಮ್ಮವರು ।
ಬಲವಂತ ಹಾರ ತವರವರು ॥

ತಾಯಿಮಕ್ಕಳ ಧನಿಯು ತಾಳ ಬಾರಿಸಿದಾಂಗ ।
ಜೋಡ ಕಿನ್ನೂರಿ ನುಡಿದಾಂಗ । ಹಲಸಂಗಿ ।
ಹೊತ್ತೇರಿ ತಾಸೆ ಬಡೆದಾಂಗ ॥

ಬಾದಾಮಿ ಸಂತ್ಯಾಗ ಬಂದಾಳ ಹಡೆದವ್ವ ।
ಮಂದೀನ ಕಂಡು ನನ್ನ ಮರತ । ಮಲ್ಲೀಗಿ ।
ದಂಡೀಯಂ ಕಂಡು ಹುಡುಕ್ಯಾಳ ॥

ತಾಯಿ ಮಕ್ಕಳಂ ಜೋಡು ತಾಳಿ ಸಾವಸಾನು ಜೋಡು ।
ನಾನು ನಮ್ಮವ್ವ ಸರಿಜೋಡು । ಬರುವಾಗ ।
ಭಾಗಾದಿ ಬಾಯಿ ಬಿಡುವಳ ॥

ಕಣ್ಣೆಂಜಲ ಕಾಡೀಗಿ ಬಾಯೆಂಜಲ ವೀಳ್ಯವ ।
ಯಾರೆಂಜಲುಂಡಿ ನನ ಮನವ । ಹಡೆದೌವ್ವ
ಬಾಯೆಂಜಲುಂಡು ಬೆಳೆದೇನ ॥

ತಾಯಿ ಕಾಣದ ಜೀವ ತಾವೂರಿ ಬಾವೂರಿ ।
ಭಾಳ ಬಿಸಲಾನ ಅವರೀಯ । ಹುವಿನ್ಹಾಂಗ ।
ಬಾಡತೀನಿ ತಾಯಿ ಕರೆದೊಯ್ಯ ॥

ಯಾರ ಇದ್ದರು ನನ್ನ ತಾಯವ್ವನ್ಹೋಲರ ।
ಸಾವಿರ ಕೊಳ್ಳಿ ಒಲಿಯಾಗ । ಇದ್ದರ ।
ಜೋತಿ ನಿನ್ಹ್ಯಾರು ಹೋಲರ ॥

ತಂದೀಯು ನೆನೆದರ ತಂಗಳ ಬಿಸಿಯಾಯ್ತು ।
ಗಂಗಾ-ದೇವಿ ನನ್ನ ಹಡೆದವ್ವ । ನೆನೆದರ ।
ಮಾಸೀದ ತಲೆಯು ಮಡಿಯಾಯ್ತು ॥

ತಾಯಿಯು ಮನಿಗ್ಹೋಗಿ ಬಾಯಿ ಬೇಡಿದ್ದುಂಡೆ ।
ಸ್ಯಾವೀಗಿ ಉಂಡೆ ಸೈದಾನ । ಹಡೆದೌವ್ವ ।
ಮಾರಿ ನೋಡಿ ಉಂಡೆ ಮೊಲೆಹಾಲ ॥

ಹಾಲುಂಡ ತವರೀಗಿ ಏನೆಂದು ಹಾಡಲಿ ।
ಹೊಳಿದಂಡಿಲಿರುವ ಕರಕೀಯು । ಕುಡಿಯಂಗ ।
ಹಬ್ಬಲಿ ಅವರ ರಸಬಳ್ಳಿ ॥

ಹಲಸಂಗಿ ಹಳದಾಗ ಕುಂಬಳ ಬೀಜೂರಿ ।
ಕೂಡಲ ಮ್ಯಾಲ ಕುಡಿ ಏರಿ । ಹತ್ತೂರ ।
ಹೂಡೇದ ಮ್ಯಾಲ ಹೂಮೊಗ್ಗಿ ॥

ತಂದಿ ನನ ಹಡೆದಪ್ಪ ಉಂಡು ಹೊರೆಯಾಕ ಹೊಂಟ ।
ಜಂಬ ಹಾಸೀದ ಜಮುಖಾನಿ । ನನ ಮನಿಯು ।
ಗೊಂಬಿ ಬೀಸ್ಯಾವ ಸುಳಿಗಾಳಿ ॥

ಹಡದವ್ವ ಬರತೈಂದು ಹರವೀಲಿ ನೀರಿಟ್ಟ ।
ಕರಿಗೆರಿಯು ಸೀರಿ ಹೊರಗಿಟ್ಟ । ಹೆತ್ತವ್ವ ।
ಹರದಾರಿ ಮ್ಯಾಲ ನೆದರಿಟ್ಟ ॥

ಗಂಜೀಯು ಕುಡಿದರು ಗಂಡನ ಮನಿ ಲೇಸ ।
ಅಂದಣದ ಮ್ಯಾಲ ಚವ್ವರವ । ಸಾರಿದರ ।
ಹಂಗೀನ ತವರುಮನಿ ಸಾಕ ॥

ನಮ್ಮವ್ವ ನನ ತಾಯಿ ಹಣ್ಣು ಹಾಗಲಕಾಯಿ ।
ಸುಮ್ಮನೆ ಬೈದ ಗರತೀಗಿ । ಹಡೆದವ್ವ ।
ಉಣ್ಣೋಳ ಕಾಲ ಹಿಡಿವೇನ ।

ಬಾರದ್ದು ಬಯಸಿದರ ಯಾರ ಖಳುವ್ಯಾರ ತಾಯಿ ।
ದೇವದುರ್ಗದ ತುಳಸೀಯು । ಬಾಳಕ ಮಾಡಿ ।
ತಾಯಿ ಹಡದವ್ವ ಖಳುವ್ಯಾಳ ॥

ಭತಗುಣಕಿ ಎಂಬೂದು ಭಂಗಾರ ಪಟ್ಟಣ ।
ಇಟ್ಟಂಗಿ ಕಲ್ಲು ನೆಲಗಂಚ । ಅಗಸ್ಯಾಗ ।
ಬಿಟ್ಟ ಬಂದೀನ ನನ ಬಳಗ ॥

ತಾಯಿ ಕಟ್ಟಿದ ಬುತ್ತಿ ತರತರದ ಯಾಲಕ್ಕಿ ।
ಜರತರದ ಜಾಣಿ ಹಡೆದವ್ವ । ನಿನ ಬುತ್ತಿ ।
ಬಿಚ್ಚ್ಯುಂಡ ಭೀಮರತಿ ಮ್ಯಾಲ ॥

ತಾಯಿಲ್ಲ ತವರೀಗಿ ಹೋಗದಿರು ನನ ಮನವ ।
ನೀರಿಲ್ದ ಕೆರಿಗಿ ಕರ ಬಂದು । ತಿರುಗಾಗ ।
ಅಗ ನೋಡಿದರ ದುಃಖಗಳ ॥

ತಾಯಿ ನನ್ಹಡೆದೌವ್ನ ಜೀವೆಲ್ಲ ನನ ಮ್ಯಾಲ ।
ಘಡಿ ಹಾಕೊ ರಾಯ ಕುದರೀಗಿ । ಸಂಗಾಟ ।
ಆಳ ಖಳುವರಸ ಐನೂರ ॥

ಉಂಗುರ ಉಡದಾರ ಮುರದರ ಮಾಡಿಸಬಹದು ।
ಮಡದಿ ಸತ್ತರ ತರಬಹುದು । ಹಡೆದಂಥ ।
ತಂದೆತಾಯೆಲ್ಲಿ ಸಿಕ್ಕಾರ ॥

ಗೆಣತಿ ಗೆಣತಿ ಕೂಡಿ ವರತಿ ನೀರಿಗೆ ಹೋಗಿ ।
ಗರತಿ ನಮೌವ್ನ ಪರಸಂಗ । ತೆಗೆದರ ।
ವರತೀಯು ನೀರ ಸೆಲಿ ಬಂತ ॥

ಕಾಶೀಗಿ ಹೋಗಲಕ ಏಸೊಂದು ದಿನ ಬೇಕ ।
ತಾಸ್ಹೊತ್ತಿನ್ಹಾದಿ ತವರೂರ । ಮನಿಯಾಗ ।
ಕಾಸಿ ಕುಂತಾಳ ಹಡೆದವ್ವ ॥

ಆಕಳ ಕರು ಬಂದು ಅಂಬ ಅಂಬಾ ಎಂದು ।
ತಮ್ಮವ್ವನ ಮೊಲಿಯ ನಲಿನಲಿದು । ಉಂಬಾಗ ।
ನಮ್ಮವ್ವನ ಧ್ಯಾನ ನನಗಾಗಿ ॥

ಕಂಡ ಕನಸs ಹೇಳ ಉಂಡ ಊಟs ಹೇಳ ।
ಪಂಡಿತ ಹಕ್ಕಿ ನೀ ಹೇಳ । ತವರವರು ।
ಎಂದಾರೆ ಕರೆಯ ಬರತಾರ ॥

ಅಕ್ಕತಂಗೆರ ಹೊರತು ಮತ್ತೊಬ್ಬ ಗೆಳತಿಲ್ಲ ।
ಮಕ್ಕಳ ಹೊರತು ಬಳಗಿಲ್ಲ । ನನ ತಾಯಿ ।
ಕಾಶಿ ನಿನ ಹೊರತು ತವರಿಲ್ಲ ॥

ಎಂಟೆಂಟು ದಿನದಾಗೆ ಸಂತೆ ನಂತವುರಾಗೆ ।
ಬಂಟನ ಮೇಲೆ ಕಡಲೆಯ । ಹೇರಿಕೊಂಡು ।
ನೆಂಟನಾಗಿ ಬಂದ ಹಿರಿಯಣ್ಣ ॥

ಸಾತೆಯ ಮನೆಯೊಳು ಸಮರಂತೆ ನಮ್ಮವ್ವ ।
ಸಂತಿಟ್ಟ ನನ್ನ ಕಳುಹ್ಯಾಳೆ । ನಿಂತಾಳೆ ।
ಸಾಲು ಸಂಪಿಗೆ ನೆರಳಾಗೆ ॥

ಹೆಣ್ಣುಮಕ್ಕಳ ಕಳುಹಿ ಹೇಗಿದ್ದೆ ನಮ್ಮವ್ವ ।
ಹನ್ನೆರಡಂಕಣದ ಅರಮನೆ । ಗೋಡೆಮೇಲೆ ।
ನಮ್ಮಂಥ ರೂಪ ಬರಕೋಳೆ ॥

ಅತ್ತರೆ ಕರೆದರೆ ಹತ್ತರಿದ್ದೇವೇನೆ ।
ಹುಚ್ಚೇನೆ ಅವ್ವಾ ಮರುಳೇನೆ । ಗೋಡೆಯ ।
ಚಿತ್ತಾರ ನೋಡಿ ಮರೆಯವ್ವ ॥

ಹೆಣ್ಣುಮಕ್ಕಳ ದುಃಖ ಹೆತ್ತವ್ವ ಬಲ್ಲಳು ।
ಹುತ್ತದ ಒಳಗಿರೋ ಸರಪನ । ಬೇಗೆಯ ।
ನೆತ್ತೀ ಮೇಲಿರುವ ಶಿವ ಬಲ್ಲ ॥

ಮುತ್ತಿನ ಮೂಗಂತಿ ನಮ್ಮಪ್ಪ ಮಾಡಿಸಿಕೊಟ್ಟ ।
ಮುತ್ತೈದೆತನ ಶಿವಕೊಟ್ಟ । ಮೇಲೆ ಬಹು ।
ಭಾಗ್ಯವನು ಕೊಟ್ಟ ಶ್ರೀಹರಿಯು ॥

ಕಾಣ್ಕೆ ಬಂದವು ಐದು ತೆಂಗಿನಕಾಯಿಗಳು ।
ಯಾರ್‍ಯಾರಿಗೊಂದು ಕಳುಹಲಿ । ನನ್ನಮ್ಮ ।
ಬೇರು ಬಿಟ್ಟಂತೆ ಬಳಗವು ॥

ತೊಟ್ಟಿಲ ಹೊತ್ಕೊಂಡು ತವರುಬಣ್ಣ ಉಟ್ಕೊಂಡು ।
ಅಪ್ಪ ಕೊಟ್ಟೆಮ್ಮಿ ಹೊಡಕೊಂಡು । ತೌರೂರ ।
ತಿಟ್ಟತ್ತಿ ನಿಂದು ನೋಡ್ಯಾಳೋ ॥

ಬಾಳಿ ತೋಟದಾಗೆ ಬಾಗಿ ನೀರ್ ಹೊಯ್ಯೇರೆ ।
ಚಂದ್ರಮರೆ ಕೇಳಿ ಮೈದುನರೆ । ಸಾನೀಗ ।
ಹೋಗಿ ಬರುವೆ ನಮ್ಮ ತವರೀಗೆ ॥

ಅಂದಲ ಸಹಿತಲೆ ಒಂದಳು ತಮ್ಮನ ಮನೆಗೆ ।
ನಿಂದಿರೆ ಅಕ್ಕ ನಡುಮನೇಲಿ । ಒಳಗಿರುವ ।
ಸುಂದರೀ ಕೇಳಿ ಬರುತೀನಿ ॥

ಪಾಪಿ ತಮ್ಮನ ಮನೆಗೆ ಯಾಕ ಬಂದೆ ಅಕ್ಕಯ್ಯ ।
ತಾಟಗಿತ್ತವಳೆ ತೌರಾಗೆ । ತಮ್ಮನ ಮನೇಲಿ ।
ಕೋಟೆಯ ನೋಡಿ ತಿರುಗವ್ವ ।

ಕೋಟೆಯ ನೋಡಿದೆ ಕೊತ್ತಳ ನೋಡಿದೆ ।
ನೋಡಿದೆ ತಮ್ಮನೆದೆ ಭುಜವ । ತಮ್ಮಯ್ಯ ।
ಮಡದಿಗಂಜೋನೆ ಸುಖಿ ಬಾಳೋ ॥

ನನ್ನೂರ ಮುಂದೆ ಎಮ್ಮಿ ಕಾಯೋ ಗೊಲ್ಲ ।
ನನ್ನವರು ಕಂಡ್ರೆ ಬರಹೇಳೊ । ಅವರುಡಿಸಿರುವ ।
ಸಣ್ಣಂಚಿನ ಸೀರೆ ಆಳಿದಾವು ॥

ನನ್ನ ತವರವರು ಕನಕ ಮುತ್ತಿನೋರು ।
ಕಣಕದಿವರು ಧನಿಕರು । ಅಣ್ಣಯ್ಗೋಳು ।
ಅಣಕದಿಂದ್ವಾಲೆ ಬರೆದಾರು ॥

# ಅಣ್ತಮ್ಮರೂ ಅಕ್ಕತಂಗಿಯರೂ
# ಅತ್ತಿಗೆ ನಾದಿನಿಯರೂ

ಹಸರ ಕುಬುಸದ ಮ್ಯಾಲ ಎಸಳ ಕೂದಲ ಬಿಟ್ಟು ।
ಬಿಸಿಲಿಗ್ಯಾಕಕ್ಕ ಮಲಗ್ಯಾಳ । ಅಕ್ಕನ ।
ಕಾಸಿ ಮೋಜಿನ ಬಯಕಿ ತಿಳಿಯುವ ॥

ಹೆಣ್ಣೀನ ಜನುಮಾಕ ಅಣ್ಣತಮ್ಮರು ಬೇಕು ।
ಬೆನ್ನ ಕಟ್ಟುವರು ಸಭೆಯೊಳಗ । ಸಾವೀರ ।
ಹೊನ್ನ ಕಟ್ಟುವರು ಉಡಿಯೊಳಗ ॥

ಎನಗ ಯಾರಿಲ್ಲಂತ ಮನದಾಗ ಮರುಗಿದರ ।
ಪರನಾಡಲೊಬ್ಬ ಪ್ರತಿಸೂರ್ಯ । ನನ್ನಣ್ಣ ।
ಬಿದಿಗಿ ಚಂದ್ರಾಮ ಉದಿಯಾದ ॥

ಅವರೀಗಿ ಅವರಣ್ಣ ಅವಲಕ್ಕಿ ಖಳುವ್ಯಾನ ।
ನಮ್ಮಣ್ಣನೇನು ಬಡವೇನ । ಖ್ಯಾದೀಗಿ ।
ಗರಿಯೊಳಗ ಘಳಗಿ ಖಳಸ್ಯಾನ ॥

ಕುದುರೀಯು ಕುಣಿಸೂತ ಆನೀಯು ನಡಿಸೂತ ।
ಅರಗಿಣಿಗೆ ಮಾತ ಕಲಿಸೂತ । ಬರತಾನ ।
ಬರಿಗೊಡದಮ್ಮ ಬದಿಗಾಗ ॥

ಹಳ್ಳದ ದಂಡೀಗಿ ಹಸರು ಮೆಣಸಿನಕಾಯಿ ।
ದಣಸ್ಯಾಡತಾವ ಗಿಣಿಹಿಂಡು । ಅಣ್ಣಯ್ಯನ ।
ಕುಣಸ್ಯಾಡತಾಳ ಅತ್ತೀಗಿ ॥

ಅಣ್ಣನ ಹೆಂಡತಿ ಕಣ್ಣೀಗಿ ಒಳ್ಳೆವಳು ।
ಸುಣ್ಣದ ನೀರ ಒಲಿ ಮುಂದ । ಇಟಗೊಂಡು ।
ಎಮ್ಮಿ ಹಾಲಿಂದು ಬಡಸ್ಯಾಳ ॥

ಹಡೆದವ್ವ ಹಾಳಿಂದು ಧಡ ಧಡ ನಾ ಬಂದೆ ।
ಒಳಗೆ ಅಣ್ಣಯ್ಯನ ಮಡದೀಯ । ಧನಿ ಕೇಳಿ ।
ತಲಬಾಗಿಲಿಂದ ತಿರುಗೀದೆ ॥

ಹಡೆದವ್ವ ಇದ್ದಾಗ ನಡುಮನಿ ನನಗಿತ್ತ ।
ಕಡಗದ ಕೈಯ ಸೂಸಿ ಬಂದು । ನಡೆದಾಗ ।
ತುದಿಗಟ್ಟಿ ನನಗ ಎರವಾಯ್ತ ॥

ಕಟ್ಟ್ಯಾಣಿ ಕರವಣಿ ಕಟ್ಟಿಂದ ಮಡದೀಗಿ ।
ಟಿಕ್ಕಿದನ ಗುಂಡ ತಗಿಯಂದ । ನನ ತಮ್ಮ ।
ದಿಟ್ಟ್ಯಾದವಂದ ಮಡದೀಗಿ ॥

ಅಕ್ಕತಂಗೆರು ಮೇಲ ಮುತ್ತುಮಾಣಿಕ ಮೇಲ ।
ಉತ್ತುರಿ ಸಾತಿ ಮಳಿ ಮೇಲ । ನನ ತಮ್ಮ ।
ನೀ ಮೇಲ ನನ್ನ ಬಳಗಾಕ ॥

ನಕ್ಕರ ನಗತಾವ ಚಿಕ್ಕ ತಮ್ಮನ ಹೋರಿ ।
ಹಕ್ಕಿ ಹಾರಿದರ ಬೆದರ್‍ಯಾವ । ನಗರದ ।
ಜಕ್ಕ್ಯಾತಿ ಮೀರಿ ಬರತಾವ ॥

ಸರದಾರ ಬರುವಾಗ ಸುರಿದಾವ ಮಲ್ಲೀಗಿ ।
ಧೊರೆ ನನ್ನ ತಮ್ಮ ಬರುವಾಗ । ಯಾಲಕ್ಕಿ ।
ಗೊನಿ ಬಾಗಿ ಹಾಲ ಸುರಿದಾವ ॥

ಕೆಂಚ ನನ ತಮ್ಮಯ್ಯ ಕೆಮುಜೋಳ ತೂರ್‍ಯಾನ ।
ಸುಂಕ ಹಾರ್‍ಯಾವ ಸುರಪೂರ । ಬಾಲ್ಯಾರು ।
ಸುಂಕ ನೋಡುತಲೆ ಬೆರಗ್ಯಾರ ॥

ಸೊಲ್ಲಾಪುರದಣ್ಣಗ ನಿಲ್ಲದಲೆ ಬರಹೇಳ ।
ಸೀರ್ಯೊಲ್ಲ ಅವನೆ ಕುಬಸೊಲ್ಲ । ಅಣ್ಣನ ।
ಮಾರಿ ನೋಡಂಥ ಮನವಾಗಿ ॥

ಪುಂಡಿಯು ಪಲ್ಲೀಯು ಚೆಂಡೀಯು ಕಡಿದಂಗ ।
ಪುಂಡ ನನ ತಮ್ಮ ಸಾವುಕಾರ । ನಾ ಮಾತು ।
ಬಂಡೀಗಿ ಕೀಲು ಜಡಿದಂಗ ॥

ಬಸರಾದರ ತೊಡಬೇಕ ಹಸರ ತಾಬೂತಿ ಕುಬುಸ ।
ಹಸರೇಲಿ ಒಳಗ ಉಣಬೇಕ । ನನ ತಮ್ಮ ।
ಹೊಸ ಬೀಗನಾಗಿ ಬರಬೇಕ ॥

ಅಣ್ಣ ತಮ್ಮರು ಬೇಡಿ ಹೊನ್ನ ಸೂರಿಗೆ ಮಾಡಿ ।
ಅಣ್ಣ ನಿನಗೊಬ್ಬ ಅಳಿಯನ । ನಾ ಬೇಡಿ ।
ಸನ್ಯಾಸಿ ಶಿವಗ ತಪವಿದ್ದ ॥

ಹನ್ನೆರಡು ವರುಷಕ್ಕ ಕನ್ಯೆ ಮೈನೆರೆದಾಳ ।
ನಾನೇನ ಒಯ್ಲಿ ಕೊಡವೀಗಿ । ತಂಗೀಗಿ ।
ಕನ್ನಡಿ ಕುಬುಸ ನನೆದಂಡಿ ॥

ಮೂರುವ ಸಂಜೀಗಿ ಚೆಂದರನ ಬೆಳಕಿಲಿ ।
ಯಾರುಬರುತಾರ ನನ ಮನಿಗಿ । ತಮ್ಮನ ।
ರಾಜಪಂಡಿತನ ಗೆಳೆಯರು ॥

ಬಂಗಾರಬಳಿ ಮುಂದ ಬಿಂದುಲಿದ್ದರ ಛಂದ ।
ಒಂದು ಮಂದ್ಯಾಗ ನನ್ನಣ್ಣ । ತಾ ಕೂತು ।
ಬಂದನೆಂದರ ಬಲು ಛಂದ ॥

ಎಂದು ಇಲ್ಲದ ನನ ಎಡಗಣ್ಣ ಹಾರೀತ ।
ಚೆಂದರಹುಬ್ಬ ಕುಡಿಬೆಳಕ । ನನ ತಮ್ಮ ।
ಸಂಜಿಗ್ಹಡೆದವ್ವ ಮಗ ಬಂದ ॥

ಆಡೀನ ಮೇಲಿ ಹಂಗ ಜೋಡ ಸಾವಿಬ್ಬರ ।
ಆಡಬ್ಯಾಡ ತಂಗಿ ಕದನವ । ಜಗಳಕ ।
ಜೋಡೀನ ಪಕ್ಕಿ ಅಗಲ್ಯಾವ ॥

ತಾವರಿಯ ಗಿಡ ಹುಟ್ಟಿ ದೇವರಿಗಿ ನೆರಳಾಗಿ ।
ನಾ ಹುಟ್ಟಿ ಮನಿಗಿ ಎರವಾದ । ನನ ತಮ್ಮ ।
ತಾ ಹುಟ್ಟಿ ಮನಿಗಿ ಧನಿಯಾದ ॥

ಅಣ್ಣ ಬರತಾನಂತ ಅಂಗಳಕ ಥಳಿ ಕೊಟ್ಟ ।
ರನ್ನ ಬಾಚ್ಚಲಕ ಮಣಿ ಹಾಕಿ । ಕೇಳೀನ ।
ಥಣ್ಣಗ್ಹಾರಿಲ್ಲ ತವರವರು ॥

ಅಚ್ಚಮಲ್ಲಿಗಿ ಹೂವು ಮುಚ್ಚಿ ಮಾರುವ ಜಾಣಾ ।
ನಾ ಕೊಳುವನಿದರ ಬೆಲಿ ಹೇಳೊ । ತಂಗೀಗಿ ।
ಸುರುಳಿಗೂಡಲದ ಸುಗುಣೇಗಿ ॥

ಮಲ್ಲಾಡದ್ಹಕ್ಕಿಗಿ ಮಂಚ್ಹಾಕಿ ನನ್ನ ತಮ್ಮ ।
ಕಂಚೀನ ಗುಂಡು ಕವಣೀಯ । ಹೊಡೆದರ ।
ಕೆಂಚ ನಿನ ತೋಳ ಹೊಳವಾವ ॥

ತಂಗಿ ತಂಗೀ ಬಾರ ತಂಬೂಲ ತುಟಿ ಬಾರ ।
ಸೆಟ್ಟಿ ಸಾವುಕಾರ ಸೊಸಿ ಬಾರ । ನನ ತಂಗಿ ।
ಭಂಗಾರ ಬಾರ ಬಯಲೀಗಿ ॥

ಅತ್ತೀಯ ಮನಿ ಸುದ್ದಿ ಹತ್ತ್ಯಾವ ತವರೀಗಿ ।
ಸಿಟ್ಟಿನವ ಭಾಳ ನನ್ನಣ್ಣ । ಕೇಳೂತ ।
ಬಿಟ್ಟಾನೊ ತನ್ನ ಮಾರಿಗುದರಿ ॥

ಅತ್ತಿಯ ಮನಿಗ್ಹೋಗಿ ಆರು ತಿಂಗಳಾಗಿ ।
ಬೆಳದಿಂಗಳು ನಮಗ ಬಿಸಲಾಗಿ । ನನ ತಮ್ಮ ।
ಬಿಳಿಗುದರಿ ಭೀಮ ಕರಿಬಂದ ॥

ಬಾಳೀಯು ಬನದಾಗ ಬಾಯಿ ಮಾಡವನ್ಯಾರ |
ತಾಯಿ ಹಡೆದವನ ಕಿರಿಮಗ | ನನ ತಮ್ಮ |
ಬಾಳೀಗಿ ನೀರ ಬಿಟ್ಟಾನ ||

ಮಳಿ ಬಂತು ಮಳಿ ಬಂತು ಬೆನ್ನಿಂದ ಹೊಳಿ ಬಂತು |
ಇನ್ನೊಂದು ಕೊಡವ ತರಲಿಲ್ಲ | ತಮ್ಮನ
ಗೀರಗಂಧಕ ನೀರಿಲ್ಲ ||

ಗುಡಹೆಂಡರ ಮಾತು ಒಂದೆ ಹಾಸಿಗಿ ಮ್ಯಾಲ |
ಗಂಧ ಸಿಂಬಡಿಸಿ ನಗತಾಳ | ನನ ತಮ್ಮ |
ಗಂಗಿ ನಿನಗೆಲ್ಲಿ ದೊರೆತಾಳ ||

ಸಣ್ಣ ಶಾಂವಿಗಿ ಒಲ್ಲ ಚಿನ್ನಿ ಸಕ್ಕರಿ ಒಲ್ಲ |
ಹೆಣ್ಣೆಂಬ ಸೆಬುದ ಬಿಡವೊಲ್ಲ | ನನ ತಮ್ಮ |
ಹೆಣ್ಣುಕೊಡತೀನಿ ಉಣ್ಣೇಳೋ ||

ತಂಗೀಗಿ ಖಸುವ್ಯಾನ ತೆಪರೇರಿ ನಿಂತಾನ |
ಅಂಗೀಲಿ ನೀರು ಮರಸ್ಯಾನ ನನ್ನಣ್ಣ |
ಇಂದೀಗಿ ತಂಗಿ ಎರವಂದಾ ||

ಬೀಗ ಬರತಾನಂತ ಬೀದೀಯು ಉಡುಗೀದ |
ಗೋದ ಮಲ್ಲೀಗಿ ಹರವೀದ ನನ ತಮ್ಮ |
ಬೀದೀಯು ನೋಡಿ ಬೆರಗಾದಾ ||

ಪರನುಳ್ಳ ಒಗತನ ಒಳಗ ಸೇದೀ ಭಾವಿ |
ಹಲಗಿ ತೊಟ್ಟೀಲ ಹಸುಗೂಸು | ನನ ತಂಗಿ |
ಪಡೆದು ಬಂದೀದಿ ಶಿವನಲ್ಲಿ ||

ಕಣ್ಣೀಗಿ ಮೂಗೀಗಿ ಎರಡೇನ ಅತ್ತೀಗಿ |
ನಾ ನನ್ನ ಅಣ್ಣ ಎರಡೇನ | ಅತಿಗೆಮ್ಮ !
ನಿನ್ನಿಂದ ಅಣ್ಣ ಎರಡಾದ ||

ನೂಲಾಗ ಕುಂತೀದ ನೂರೆಂಟು ಮುಯ್ಯಾಗಿ ।
ಮತ್ತ ನನ ಜೀವ ಅನುಮಾನ । ಅಣ್ಣನ ।
ನೂಲೆಳಿ ಯಾಕ ತಡದಾವ ॥

ಕಾರ್ಹುಣವಿ ಹಬ್ಬಕ ಕರಿಲಾಕ ಬರಬ್ಯಾಡ ।
ಕಾಲಬಾಡೀಗಿ ಕೊಡಬ್ಯಾಡ । ನನ್ನಣ್ಣ ।
ಹೊನ್ನ ದೀವಳಿಗಿ ಮರಿಬ್ಯಾಡ ॥

ಗಿಡ್ಡರು ನಡೆದರ ಗಿಣಿಹಿಂಡು ನಡೆದಂಗ ।
ಉದ್ದನ ಬಾಲಿ ನನ ತಂಗಿ । ನಡೆದರ ।
ರುದ್ದರನ ಥೇರ ಎಳೆದಂಗ ॥

ತಮ್ಮನ ಖಳುಹೀದ ತಲಬಾಗಲ್ಹಿಡಿದೀದ ।
ಎಲ್ಲಿತ್ತ ಸಣ್ಣ ಝುಡಿಮಳಿ । ತಮ್ಮನ ।
ಬಣ್ಣ ರುಮ್ಮಾಲ ತೋಯ್ದೀತ ॥

ಅಕ್ಕನ ಊರಾಗ ಮೆಕ್ಕೀಯ ಘಡದಾಗ ।
ಗಕ್ಕನೆ ಬಾರೊ ಮಳಿರಾಜ । ನನ್ನಕ್ಕ ।
ಮಕ್ಕಳ ತಾಯಿ ಮರಗ್ಯಾಳೋ ॥

ಅಕ್ಕತಂಗೆರ ಬಣ್ಣ ಅವರಿಹೂವಿನ ಬಣ್ಣ ।
ಕುಂಬುಸದ ಬಣ್ಣ ಕುತನೀಯ ಹಡೆದಂಥ ।
ನಾರಿ ನಿನ ಬಣ್ಣ ರವಿಚಿನ್ನ ॥

ಬಡತನ ಬಂದರ ಬಾಗಿಕೊಂಡಿರುವೇನೊ ।
ಬಾರೆನಣ್ಣಯ್ಯ ನಿನ ಮನಿಗೆ । ನಿನ ಮಡದಿ ।
ಏಳಲ ಮಾಡಿ ನುಡಿದಾಳ ॥

ಯಾಲಕ್ಕಿ ಮಾಟದ ಎರಡಂಗಿ ತೊಟ್ಟಾನ ।
ಎಲಿಬಳ್ಳಿಯೊಳಗ ಸುಳಿದಾನ । ನನ ತಮ್ಮ ।
ಎಲಿಗೊಂದ ಮಾತು ಒಗೆದಾನ ॥

ತೋಟಕ ಹೋದಣ್ಣ ಊಟಕ್ಕ ಬರಲಿಲ್ಲ ।
ತೋಟದ ಹೂವ ತಲಿ ತುಂಬ । ಇಟಗೊಂಡು ।
ಊಟದ್ಹಂಬಲ ಮರೆತಾನ ॥

ಕೋಪವ್ಯಾಕಣ್ಣಯ್ಯ ಕೊಳ್ಳೊ ಕಾಲಿಗೆ ನೀರ ।
ಬಾಯಿ ತಂಬುಳವ ಉಗಳಣ್ಣಾ । ನೀ ಬರುವ ।
ದಾರೀಯ ನೋಡಿ ಬಡವಾದೆ ॥

ಎಳಿಹುಲ್ಲು ಅಡವ್ಯಾಗ ತಿಳಿನೀರು ಕೊಳದಾಗ ।
ಬಲವುಳ್ಳ ನಾಯಿ ಸಾಕ್ಯಾನ । ನನ್ನಣ್ಣ ।
ಒನಪೀಲೆ ಕುರಿಯ ಕಾಯಾನ ॥

ಹಂಡಬಂಡದ ಕುದರಿ ಗೊಂಡೇದ ಲಗಾಮು ।
ಕಂಡೇನ ಊರ ತೆವರಾಗ । ನನ್ನಣ್ಣ ।
ದಂಡಾಡಿ ದುರ್ಗ ಹೊಗತಾನ ॥

ಅರಸೀಣ ಬಳ್ಳೊಳ್ಳಿ ಸಬಸಿ ಬಿತ್ತುವ ಬಾಳಾ ।
ವರುಷದ ಬಾಣತಿ ನಿನ ತಂಗಿ । ಎರೆದ ನೀರ ।
ಅರಷೀಣ ಬನಕ ಹರದಾವ ॥

ಹಸಗೂಸು ಕಾಡಿದರ ತುಸ ಕೆಲಸ ನಡಿಯುವ ।
ಹಸಿದು ಬಂದಣ್ಣ ಉಣಲಿಲ್ಲ । ನನ ಮನಿಯ ।
ಕಸ್ತೂರಿ ಕೈಯ ಬಿಡಲಿಲ್ಲ ॥

ಮುನವಳ್ಳಿ ಮುಂದೀನ ವನವ ಕಂಡೀರಕ್ಕಾ ।
ತನವೀಗಿ ಅಳ್ಳ್ಯಾವ ಹೂಮುಗ್ಗಿ । ನನ ಚೆಲುವ ।
ತಮ್ಮಗೊಡದಾವ ಮೊಕಮೀಸಿ ॥

ಬಾವೂಲಿ ಇಟಗೊಂಡು ಕಾವೂಲಿ ತಿದ್ದ್ಯಾವ ।
ಗಾಳಿ ಬಂದತ್ತ ಬಳಕೂವ । ನನ ತಮ್ಮ ।
ಬಾಳಿಯೆಲಿಗಿಂತ ಬಲು ಚೆಲುವ ॥

ಹಂತೀಯ ನಮ್ಮತ್ತು ಹಂತೀಲಿ ಬಂದರ |
ಸೆರಗೀಲಿ ಸುಂಕ ವರಸೇನ | ತಮ್ಮನ |
ಹಂತೀಯ ಎತ್ತು ಹದಿನಾರ ||

ಹಾದಿಯ ಮನಿಯಾಕಿ ಹರದಿ ನನ ತಂಗೆವ್ವ |
ಹಾದಿಬಿಡು ನನಗ ಹಸಿವಿಲ್ಲ | ಬಗಲಾನ |
ಬಿಂದೂಲಿ ಬಾಳಗ ಬಿಸಿಲಾತು ||

ಊರೀಗಿ ಹೋಗವರ ಉಸ್ತಾರೇನ್ಹೇಳಲಿ |
ಕಸ್ತೂರಿ ಅಂಗಿ ಬಗಲಾಗ | ನನ ತಮ್ಮ |
ಉಸ್ತಾರ್‍ಯಾಗೂಟ ಮರತಾನ ||

ಗಂಧವ ಹಚ್ಯಾನ ಗಾಳೀಗಿ ನಿಂತಾನ |
ಒಂದೊಂದು ಹೇಳಿ ನಗತಾನ | ನನ ತಮ್ಮ |
ಭಿಂಗ್ಯಾರಾಟೆಲ್ಲಿ ಕಲತಾನ ||

ಅತ್ತಿಗೆಯ ಅರಸೇನ ತಾಯಿ ಕುಮಾರೇನ |
ಮಕ್ಕಳಿಗಿ ಮಾವ ನನಗಣ್ಣ | ಬಂದರ |
ನಿಚ್ಚದೀವಳಿಗಿ ಮನಿಯಾಗ ||

ಹಸನುಳ್ಳ ವಿಭೂತಿ ನೊಸಲೀಗಿ ಘಚಗೊಂಡು |
ಬಸವಣ್ಣಗ ಮೋವು ಕೊರೆಯುವ | ತಮ್ಮಗ |
ಬಸವೇಶ ವರವ ನೀಡ್ಯಾನ ||

ದೇವರ ಮನಿಯಾಗ ದೇವೇಂದ್ರ ಮಲಗ್ಯಾನ |
ನಾಯೇನು ಅಂದು ಕರೆಯಲಿ | ನನ ತಮ್ಮ |
ಮಾದೇವರೇಳೊ ಮಗಳರಸ ||

ತಾಯಿಮಕ್ಕಳು ಜೋಡು ತಾಳಿಸಾಮಾನು ಜೋಡು |
ನಾನು ನಮ ತಂಗಿ ಸಮಜೋಡು | ಬರುವಾಗ |
ಕಂಡವರು ಕರೆದು ಕೇಳ್ಯಾರ ||

ಬಿತ್ತುಽವ ತಮ್ಮಯ್ಯ ಎತ್ತಿಗೇನಂದಾನ ।
ಹತ್ತು ಖಂಡಗ ಬೆಳಿಽಲೆಂದ । ಭೂಮಿತಾಯಿ ।
ಮುತ್ತೀನುಡಿಯಕ್ಕಿ ನಿನಗೆಂದ ॥

ಅಣ್ಣಽನ ಹೊಲವಾಗ ಬೆಳ್ಳಽನ ಬಿಳಿಜೋಳ ।
ಮೆಲ್ಲಽಕ ಮೆಲಿಯೊ ಗಿಣಿರಾಮ । ನನ್ನಣ್ಣನ ।
ಕಲ್ಲ ಬಂದಾವು ಕಡಿಗಾಗೋ ॥

ಒನಕೆ ಒಳ್ಳೇದವ್ವ ಒಲಿದು ಕುಟ್ಟುವರಿಲ್ಲ ।
ಸೀರೆ ಒಳ್ಳೇದವ್ವ ಸೆರಗಿಲ್ಲ । ಹೆಣ್ಣಽನ ।
ಗುಣ ಒಳ್ಳೇದವ್ವ ರೂಣವಿಲ್ಲ ॥

ಕಬ್ಬು ಕಾರುಳ್ಳವನೆ ಹುಬ್ಬು ನೇರುಳ್ಳವನೆ ।
ಗೊಬ್ಬರದ ಗಾಡಿ ಹೊಡೆಯುವನೆ । ಅಣ್ಣಯ್ಯನ ।
ಹುಬ್ಬಿಗಿನ್ನೊಂದು ಸರಿಯುಂಟೇ ॥

ಹನ್ನೆರಡೆತ್ತಿನ ಬಾರಿ ಹೊನ್ನ ಮೇಟಿಽ ಕಂಬ ।
ಬಾಸಿಂಗ್ದ ಕೊಳಗ ಬಲಗೈಯ । ಅಣ್ಣಯ್ಯ ।
ರಾಸಿ ಅಳೆಯೋದು ಬೆಳಗಾಯ್ತು ॥

ಎತ್ತು ನಿಂತ ಗದ್ದೆಯಲ್ಲಿ ಬಿತ್ತೂತ ನಿಂತಾತನಾರೆ ।
ಮುತ್ತಿನಂಥ ಕಾಲು ನೀಡಿದೊಳು । ಅಣ್ಣಯ್ಯ ।
ಖಂಡಽಗ ಬಿತ್ತಿ ಕಾಡ ಬೆಳೆದಾನ ॥

ಒಂಟೆಯ ಮೇಲೆ ಬರುವ ಬಂಟಽನ ನೋಡಿರೆ ।
ಎಂಟಾಳಿಗಿಂತ ಚೆಲುವಽನ । ನನ್ನಮ್ಮನ ।
ಸೊಂಟ ನೋಡಿ ಹೆಣ್ಣು ಕೊಡಿರಮ್ಮ ॥

ಆನೆಯ ಮೇಲೆ ಬರುವ ಅರಸಽನ ನೋಡಿರೆ ।
ಆರಾಳಿಗಿಂತ ಚೆಲುವಽನ । ನನ್ನಮ್ಮ ।
ತೋಳ ನೋಡಿ ಹೆಣ್ಣು ಕೊಡಿರಮ್ಮ ॥

ಹೋಗಿ ಬಾರೆ ನೀನು ಹೊನ್ನೋಲೆ ಕಿವಿಯವಳೆ |
ಕೆನ್ನೆಲಿ ಸೂರ್ಯ ಹೊಳೆವವಳೆ | ಸೊಸೆ ಮುದ್ದೆ |
ತವರು ಒಳ್ಳೇದೆಂದು ಇರಬೇಡ ||

ಮಾಳಿಗೆ ಮಾಳಿಗೆ ಏಳಂಕ್ಣದ್ಮಾಳಿಗೆ |
ಮಾಳಿಗೆ ಮೇಲೆ ಮಲಗಿರೊ | ನೀರಂಜಿ |
ನಾದ್ನಿ ಬಂದಾಳ ಮುಖ ತೋರೆ ||

ಎಳೆಬಾಳೆ ಸುಳಿಬಾಳೆ ಅಪರಂಜಿ ಚಿನ್ನಾವೆ |
ಮೂಡ್ಲ ನಾಡಿಂದ ತಂಗೆಮ್ಮ | ಬಂದವ್ಳೆ |
ನೀ ಒಂದು ಮಾತು ಕರೆಹೋಗೆ ||

ತಂಗೀಯ ಕರಕೊಂಡು ಕೆಂದೀನ ಹೊಡಕೊಂಡು |
ತಂಗೀ ಮಕ್ಕಳಿಗೆ ಬಿಸುಲೆಂದು | ಅಣ್ಣಯ್ಯ |
ವಲ್ಲಿ ಮುಂಜೆರಗ ಹಿಡಿದ್ರನೇ ||

ಅಕ್ಕನ ಕರಕೊಂಡು ಹಂಡೀಯ ಹೊಡಕೊಂಡು |
ಅಕ್ಕನ ಮಕ್ಕಳಿಗೆ ಬಿಸುಲೆಂದು | ತಮ್ಮಯ್ಯ |
ವಲ್ಲಿ ಮುಂಜೆರಗ ಹಿಡಿದ್ರನೆ ||

ಹಾಲಿಗಕ್ಕೀ ಹಾಕಿ ಹಾದೀಯ ನೋಡಿದೆ |
ದೂರಲಿಂದೆ ಕಂಡೆ ಕುದುರೆಯ | ಅಣ್ಣನ ದಾಡ |
ಕಾಲಾಳ ಕಂಡು ತಿರುಗಿದೆ ||

ಕಾಲಾಳಿಗೆ ಬಾಳೆ ಎಲೆಯವೆ ಅಣ್ಣಯ್ಯ |
ನಿನಗವೆ ಬೆಳ್ಳಿ ಹರಿವಾಣ | ಅಣ್ಣಯ್ಯ |
ಬಾಳೆಗೆ ದಂಡ ಬಿಡಿರಯ್ಯ ||

ಅಂಗಿಯ ಮೇಲಂಗಿ ಸುಂಗರದ ಮೇಲುಕಟ್ಟು |
ಎಲ್ಲಿಗೆ ತಮ್ಮಯ್ಯ ನಿನ ಪಯಣ | ಸಂಕೀಹಳ್ಳಿ |
ಮಲ್ಲಗಕ್ಕಯ್ನ ಕರಿಯಾಕೆ ||

ಕುಟ್ಟೋದು ಕುಸುಮಾಲೆ ಬೀಸೋದು ಬೇಸರಿಕೆ ।
ರೊಟ್ಟಿ ಸುಡುವುದು ಬಹು ಶಃಖೆ । ಅಣ್ಣಯ್ಯ ।
ಗಟ್ಟಿಂದ ಕಳುಹೋ ಗೌಡೀರ ॥

ಸುಪ್ಪೆಂದರ ನುರಿದಾವೆ ಸುಪ್ಪೆಂದರೆ ನುರಿದಾವೆ ।
ಆನೆಯು ಪಾದಕೆ ನುರಿದಾವೆ । ಬತ್ತವ ।
ಯಾವಣ್ಣ ಬಿತ್ತಿ ಬೆಳೆದಾನೆ ॥

ಎಮ್ಮೆಯು ಎಳಗಂದಿ ನಮ್ಮವ್ವ ಬಾಣಂತಿ ।
ಅಣ್ಣಯ್ನ ಮಡದಿ ತವರೀಗೆ । ಹೋದರೆ ।
ಮತ್ತೊಂದು ಬದುಕು ನನಗಿರಲಿ ॥

ಹಟ್ಟೀಲಿ ಹತ್ತೆಮ್ಮೆ ಕೊಟ್ಟಿಗೇಲಿ ನಾಕೆಮ್ಮೆ ।
ಕೊಟ್ಟೇನೊ ಅಣ್ಣಯ್ಯ ನನಗೊಂದು । ಎಮ್ಮೆಯ ।
ನಿನ್ ಹೆಸರ್ಹೇಳಿ ಮೊಸರ ಕಡೆದೇನು ॥

ಮೊಸರ ಕಡೆಯೋಳಿಗೆ ಮೈಯೆಲ್ಲ ಬಂಗಾರ ।
ಕೊರಳಾಗಾಡ್ಯಾವ ಸರಮುತ್ತ । ತಂಗೆಮ್ಮನ ।
ಕೈಯಾಗಾಡ್ಯಾವೆ ಕಡೆಗೋಲು ॥

ಕಸಹಾಕಿ ಕೈತೊಳೆದು ಮೊಸರ ಮಡಿಕೆಗೆ ಹುಯ್ದು ।
ಹಸುಳೆ ತಂಗೆಮ್ನ ಮನೆಗ್ಹೋಗಿ । ತಂದೆನಲ್ಲೆ ।
ಎಸಳು ಬಾಸಿಗದ ಕಡೆಗೋಲ ॥

ರಾಗೀಯ ಕಲ್ಲೀಗಿ ನಾ ಮುಂದೊ ನೀ ಮುಂದೊ ।
ರಾಮಣ್ಣನೆಂಬ ಕೈಮುಂದೊ । ತಂಗೆಮ್ಮ ।
ನಾ ಮುಂದು ಅಣ್ಣಯ್ನ ಮದುವೆಗೆ ॥

# ಗೆಳತಿ

ಕೆಳದೀಯ ಕೂದಲು ಚೊಗಚೀಯ ಕಾಯಾಂಗ ।
ನಿಗುಚಿ ಬೈತಲ ತೆಗೆದಾಳ । ನನ ಗೆಳದಿ ।
ಗೆಳತ್ಯಾರ ಬಳಗಕತಿ ಛಲುವಿ ॥

ಗೆಳತಿ ಮಾಡಿದ ಕುಬಸಾ ತಿಳಿನೀರಾಗೊಗದೇನ ।
ಬಿಳಿ ಉಸುಬಿನಾಗ ಹರವೇನ । ಮಲ್ಲಾಡ ।
ಗಿಣಿ ಬಂದು ಮಗ್ಗಿ ತಗದಾವ ॥

ನಾನು ನನ್ನ ಗೆಳದಿ ಕೂಡಿ ನೀರಿಗಿ ಹೋಗಿ ।
ಕುಲವ ಕೇಳ್ಯಾರ ಬಹುಮಂದಿ । ಕೇಳಿದರ ।
ಕುಲವೆರಡು ನಮ್ಮ ಮನವೊಂದು॥

ನಾರಿ ಕಣ್ಣಿನ ನೀರ ಬಾರಿಬೀಜಿನ್ಹಾಂಗ ।
ಬೋರ್ಯಾಡತಾವ ಎದಿಮ್ಯಾಲ । ನನ ಗೆಳದಿ ।
ದೂರಿಲ್ಲ ಹೋಗ ನಿನ ತವರ ॥

ಮಟ ಮಟ ಮದ್ಯಾಣ ತಿಟಿ ತಿಟಿ ಕುಬ್ಬಸ।
ವರತ್ಯಾನ ನೀರ ಒನಒನೆದು । ತುಂಬುವ ।
ದ್ರೌಪತಿ ಚೆಲುವಿ ನನ ಗೆಳದಿ ॥

ಯಾರ ಮಗಳವ್ವ ನೀ ಎರಳಿಸೋಟದ ಗೊಂಬಿ ।
ಸುರುಳಿಗೂದಲ ಸುಲಿಹಲ್ಲ । ನನ ಗೆಳದಿ ।
ಸುಗುಣಿ ನೀನ್ಯಾರ ಮಗಳವ್ವ ॥

ಮನಿಯ ಮುಂದಿನ ಗೆಳದಿ ದನಿಯ ಕೂಡಿಸ ಬಾರ।
ದನಿ ಸುದ್ದ ನಿನ್ನ ಗುಣಸುದ್ದ । ಗೆಳದೆವ್ವ ।
ಗುಣಕ ಕಟ್ಟೀನಿ ಗೆಳೆತನ ॥

ಗೆಳತಿ ಹಡೆದಾಳಂತ ನಗತ ಬಾಗೀಣೊಯ್ದು ।
ಜರತಾರದಂಗಿ ಮುಯ್ಯೊಯ್ದು । ಗೆಳದೆವ್ವ ।
ಜನಕೊಪ್ಪು ಮಗನ ಹಡೆದಾಳ ॥

ಹೊಳಸಾಲ ಹರದೀಗಿ ಒಳತುಟಗಿ ಜಾಚೀಲಿ ।
ತಾಂಬರದ ಕೊಡವು ಬಗಲಾಗ । ನನ ಗೆಳದಿ ।
ಸಾಕೇನ ಗರತಿ ಸವಿನೀರ ॥

ಎಳ್ಳು ಹೂವಿನ ಸೀರಿ ಬೆಳ್ಳಿ ಕಾಲುಂಗುರ ।
ಹಳ್ಳದ ನೀರು ತರತಾಳ । ನನ ಗೆಳದಿ ।
ಹಳ್ಳಿ ಗೌಡರ ಹಿರಿಮಗಳ ॥

ನೀರಿಗ್ಹೋಗು ಜಾಣಿ ನಿಲ್ಲ ನಾ ಬರತೀನಿ ।
ನಿನ್ನಾಣಿ ನಿನ್ನ ಕೊಡದಾಣಿ । ಕೈಯಾನ ।
ಬಳಿಯಾಣಿ ನೀರ ಹೊಳಿಯಾಣಿ ॥

ಪಟ್ಟಣಕ ಬಾದಾವ ಬಟ್ಟ ಬಾರೀಹಣ್ಣ ।
ಊರಿಗ್ಹೋಗಣ್ಣ ಇವು ಒಯ್ಯೊ । ಆ ಊರ ।
ಕಟ್ಟಿಮನಿ ಗೆಳದಿ ಬಸುರ್ಹಾಳ ॥

ಕೂಡಿದ ಕುಡಿಹುಬ್ಬ ತೀಡಿದ ಬೈತಲ ।
ಕಾಡೀಗಿಗಣ್ಣ ರಸಗೆಂಪ । ನನ ಗೆಳದಿ ।
ಹೊಳಿಯು ಹಾದ್ಯಾಗ ಕೂಡ್ಯಾಳ ॥

ದೊಡ್ಡವರ ಮಗಳವ್ವ ಎದ್ದೇನ ಗೆಳದೆವ್ವ ।
ತಿದ್ದೂತ ಬಳಿಯ ತಿರುವೂತ । ನಿಮ್ಮತ್ತಿ ।
ಮದ್ದಾನೆ ಎಂದು ಕರೆದಾಳ ॥

ಸೇದು ಭಾವಿಯ ಮ್ಯಾಲ ಸೀರಿ ಸೆಳೆಯುವಳ್ಯಾರ ।
ಕಾಡೀಗಿಗಣ್ಣ ನಡುಸಣ್ಣ । ನನ ಗೆಳದಿ ।
ರಾಯು ಕರದಾನು ಮನಿಗ್ಹೋಗ ॥

ಎಳ್ಳು ಹೂವಿನ ಸೀರಿ ಕೊರಳಾಗ ಚಿತ್ರಾಕ ।
ಇರಳ ಬಂದೆತ್ತ ಇಳದಾಳ । ನನ ಗೆಳದಿ ।
ಅರಳೇಲಿ ಮಗನ ಹೆಸರೇನ ॥

ಮೂಗುತಿ ಮುಂಭಾರೆ ತುರುಬೀನ ಹಿಂಭಾರ ।
ಸೇರೀನ ಒಂಕಿ ಕೈಭಾರ । ನನ ಗೆಳದಿ ।
ವಾ ಕೊಟ್ಟ ಸೀರಿ ನಿಲಿಭಾರ ॥

ಗೆಳೆತನ ಕೂಡಿದರ ಗೆಜ್ಜಿ ಜೋಡಿಸಿದ್ಹಾಂಗ ।
ಗಜರೀಯ ತುಂಬ ಕೊರೆದ್ಹಾಂಗ । ಗೆಳತೆವ್ವ ।
ಗುಜ್ಜಿ ನಾವ್ಹ್ಯಾಂಗ ಅಗಲೂನ ॥

ನಿಮ್ಮ ಹಂಬಲ ನಾನ್ಯಾಕೆ ಮರೆತೇನು ।
ಕರುಸಂವೆ ಮಗನ ಮದುವೆಗೆ । ಗೆಣೆಕಾತಿ ।
ಉಡಿಸುವೆ ಸೀರೆ ರವಿಕೆಯ ॥

ನಮ್ಮ ಗೆಣೆಕಾತಿ ಹೊನ್ನೂರ ಬಣಜಿಗತಿ ।
ಪುಣ್ಯಾತಗಿತ್ತಿ ಪುರುಷರೆ । ತೊಡಿವ್ಯಾಲೆ ।
ನಮ್ಮ ಹಂಬಲ ಮರತಾಳೆ ॥

## ಅತ್ತೆಯ ಮನೆಯ ಕಷ್ಟ

ಸಕ್ಕರಿ ಹೇರಿಕೊಂಡು ಸೊಲಗಕ್ಹೋಗೂ ಜಾಣ ।
ನಮ್ಮವ್ವಗ್ಹೇಳೊ ಮರಿಬ್ಯಾಡ । ಅತ್ತಿಮನಿ ।
ಬೆಳದಿಂಗಳು ನಮಗ ಬಿಸಿಲಾಯ್ತು ॥

ಏಳಲ ಮಾಡಿದರ ತಾಳದು ನನ ಜೀವ ।
ಬಾಳೇಲಿಗಿಂತ ಬಲು ಸುಖಿ । ತಾಯ್ತಂದಿ ।
ಲ್ಯಾವಳ ಮಾಡಿ ಸಲವ್ಯಾರ ॥

ಚಿಂತಾಕು ಇಡಲಿಲ್ಲ ಚಿಂತಿ ಬಿಟ್ಟಿರಲಿಲ್ಲ ।
ಎಂಥಲ್ಲಿ ಕೊಟ್ಟಿ ಹಡೆದವ್ವ । ನಡುಮನಿ ।
ಜಂತಿ ಜರೆದಂಗ ಜರೆದೇನ ॥

ಆಕಳಂಥಾ ಅತ್ತಿ ಗೋಕುಲಂಥಾ ಮಾವ ।
ಶ್ರೀಕೃಷ್ಣನಂಥ ಪತಿರಾಯ । ನಿದ್ದರ ।
ಸಾಕಿದ ತವರ ಮರತೇನ ॥

ಅತ್ತಿಯ ಮನಿಯಾಗ ಅರವತ್ತು ಗಂಗಾಳ ।
ಬೆಳಗತೇನತ್ತಿ ಬೈಬ್ಯಾಡ । ತವರವರು ।
ಸರಮುತ್ತ ಮಾಡಿ ಸಲವ್ಯಾರ ॥

ಹಡೆದವ್ವಗ್ಹೇಳಣ್ಣಾ ಕುಡುನೀರು ದಕ್ಕವು ।
ಮುಡಿ ಮಾಸಿ ಮೂರು ದಿನವಾಗಿ । ಸನ್ನಣ್ಣಾ ।
ತಾಯವ್ವಗ್ಹೇಳೊ ಮರೆಬ್ಯಾಡ ॥

ಮಾತೀಗಿ ಮಲಕಿಲ್ಲ ರೀತೀಗಿ ತೊಡಕಿಲ್ಲ ।
ಸಾಸೀವಿಕಾಳ ಹುಳುಕಿಲ್ಲ । ಅತ್ತೀಗಿ ।
ಸೋಸಿ ನಡೆದರ ಅರಿಕಿಲ್ಲ ॥

ಗೋಕಾವಿ ಮುಂದೀನ ಕಾಕೀಯ ಗಿಡಗಳಿರಾ ।
ತಾಯಿ ಹಡೆದೌವನ ಬರಹೇಳ । ಅತ್ತಿಮನಿ ।
ಇಗ್ಗರಿ ಭಾಳ ಇರಲಾರೆ ॥

ಭಾವಯ್ಯ ಮುನಿದರ ಬಲಗಾಲ ಹಿಡಿದೇನ ।
ಭಾವಯ್ಯನ ಮಡದಿ ನೆಗೆಣ್ಣಿ । ಮುನಿದರ ।
ಬಾರಕ್ಕನೆಂದು ಕರೆದೇನ ॥

ಮಾರಯರು ಬೈದರ ಬಾರಾವು ಕಣ್ಣೀರು ।
ಮಾರಯರ ತಮ್ಮ ಮೈದೂನ । ಬೈದರ ।
ಮಾಡಿಲ್ಲದ ಮಳೆಯು ಸುರಿದಂಗ ॥

ಹಾಲ ಹರವಿಯ ಸುತ್ತ ಯಾಲಕ್ಕಿ ನಾತಾವ ।
ಯಾರುಂಡರವ್ವ ಹಗಲೂಟ । ನನ ಮನಿಯ ।
ಮಾರಾಯರ ತಮ್ಮ ಮೈದೂನ ॥

ಮೈದೂನ ಬೈದರ ಹೊಯ್ದು ಹೋಳಿಗಿಯಾದ ।
ಕೊಯ್ದು ಮಲ್ಲೀಗಿ ನನೆಯಾದ । ಮುತ್ತ್ಯಾದಾಗ ।
ಅತ್ತೀಗಿ ಹೆತ್ತಾಯಿ ಸರಿಯಂದ ॥

ಹಣ್ಣು ಮೆಣಸಿನಕಾಯಿ ಕಣ್ಣೀಗಿ ಕೆಂಪಗ ।
ಸಣ್ಣಕ್ಕಿ ಏನ ನೇಗೆಣ್ಣೆ । ಆಕಿ ಮಾತು ।
ಬೆಣ್ಣ್ಯಾಗ ಮುಳ್ಳು ಮುರಿದ್ಹಂಗ ॥

ನೇಗೇಣಿ ಮಗ ಬಂದು ನಗುತ ತೊಡಿಯಲಿ ಕೂತ ।
ಇಳಿಯೊ ಕಂದಯ್ಯ ತಿಳಿಯಾಕ । ನಿಮ್ಮೌವ್ವ ।
ನನ ಮನಿಕೆ ಇಲ್ಲ ನನಗೂಡ ॥

ಬೀಸಲಕ ಕುಂತೀನಿ ಕೂಸ ನನ ತೊಡಿಮ್ಯಾಲ ।
ವಾಸ್ಯಾಡಬ್ಯಾಡ ನೆಗೆಯೇಣಿ । ನಿನ ಕೆಲಸ ।
ತಾಸೊತ್ತಿನಾಗ ತಿರುವೇನ ॥

ಹಚ್ಚೀದ ಮಾತೀಗಿ ಹರಿವ ಗಂಗ್ಯೆರಡಾಗಿ ।
ಇಚ್ಚುಳ್ಳ ಮನವು ವಿಷವಾಗಿ । ಒಳಗೊಳಗ ।
ಹಚ್ಚಿದವರ್‍ಯ್ಯಾರ ಕದನವ ॥

ಅರಸುತೂಕದ ನಲ್ಲ ಗಳಿಸೂವ ಮೈದೂನ ।
ನಡಿಸಿಕೊಳುವತ್ತಿ ಸಿರಿಗಂಗಿ । ಮನಿಯಾಗ ।
ಬದುಕು ಮಾಡುವದು ಅರಿದೇನ ॥

ನೇರದ ಗಂಡಯ್ನ ಏನೆಂದು ಕರೆಯಲೊ ।
ಬಾರೋ ಗಂಡಯ್ಯ ಮಲಗೋಣ । ಮಂಚದ್ಮೇಲೆ ।
ತಾಳೆಹೂವಿನ ತಲೆದಿಂಬು ॥

ಉಂಡರುಟ್ಟರು ಸೇರ, ಮಂಡೆ ಬಾಚರು ಸೇರ ।
ಗಂಡನಲ್ಲಿ ಕಾಣೋ ದುಸ್ವಾನ । ಹೊಟ್ಟೆಲೆ ।
ಕೆಂಡದಂತೆ ಮೂಡೋ ರಘುರಾಮ ॥

ಶಿವರಾಯ್ನ ಮನೆ ಮುಂದ ಮಾವಿನ ಮರ ಹುಟ್ಟಿ ।
ಎಲೆಎಲೆಗೊಂದು ಗಿಳಿ ಕೂತು । ಹೇಳಿದವು ।
ಶಿವರಾಯ ನಿನ್ನ ಮೇಲೆ ಸವತಿ ತಂದ ॥

## ಮನಸ್ತಾಪ

ಹಚ್ಚಿಕೊಂಡವ್ವಗ ಚೊಚ್ಚಿಲ ಮಗಳಾದ ।
ಬಿಟ್ಟಾಡಿಕೊಳುವ ವೈರೀಯ । ಮನಿಮುಂದ ।
ಬಿಚ್ಚಗತ್ಯಾಗಿ ಹೋಳೆದೇನ ॥

ಹೋದಿಕ್ಯಲ್ಲದ ಮಾತ ಹೊಂದಿಸಾಡಲಿ ಬ್ಯಾಡ ।
ಬಂಧಾನ ನಾನು ಬಡಲಾರೆ । ಕಣ್ಣೀರು ।
ಹೊಂದಲಿ ಅವರ ಶಿಸುವೀಗಿ ॥

ಸರಗೀಯ ಕೊಂಡ್ಹ್ಯಾಂಗ ಸರದಿತ್ತ ನನ ಮನವು ।
ಸರಿಬಾರದವರು ಇದರೀಗಿ । ಬಂದರ ।
ಧರಿ ಮೋಜಿನ ಮನವ ನೆಲ ನೋಡಿ ॥

ಜಾತೀಗಿ ಬಾರದ್ದು ಯಾತಕ ನೆನಿಯಲಿ ।
ಜಾತಮಲ್ಲೀಗಿ ನನ ಮನವ । ಬಾಯಾನ ।
ಜಾಚೇಲಿ ಮಾಡಿ ಉಗಳೇನ ॥

ಅಂಜೀಕಿ ತೋರಿದರ ಅಂಜವರ ಮಗಳಲ್ಲ ।
ಮಂಜಾನದಾಗ ಹುಲಿಕರಡಿ । ತೋರಿದರ ।
ಅಂಜಿ ತಿರುಗುವರ ಸೊಸಿಯಲ್ಲ ॥

ಮನವೊಂದು ಮಾಣೀಕ ಏನಂದ ಘಾತಕ ।
ನಾ ನೊಂದ ನನ್ನ ಮನ ನೊಂದ । ಕೈಯಾನ ।
ಬಿಳಿಯೆಲಿ ಬಾಡಿ ರುಚಿ ಹಾರಿ ॥

ಕಾಚೀನ ಕರದೆಷ್ಟ ಅಡಕೀಯ ಒಗರೆಷ್ಟ ।
ಸೇರ ಚಳ್ಳೊಳ್ಳಿ ಸೆದಿಯೆಷ್ಟ । ನನ ಗೂಡ ।
ಮಾತಾಡದವರ ಬಿಗುವೆಷ್ಟ ॥

ನದಿಯ ದಂಡೀ ಮ್ಯಾಲ ಎಳಿಯ ಸವತೀಕಾಯಿ ।
ಕಡಿಯುಂದರ್‍ಯಾಂಗ ಕಡಿಯಲೆ । ಆ ಮಾತ ।
ಮರಿಯುಂದರ್‍ಯಾಂಗ ಮರೆಯಲೆ ॥

ಯಾರೀಗಿ ಯಾರಿಲ್ಲ ಈ ಮನಕ ಧೀರಿಲ್ಲ ।
ಆರ್‍ಯಾಣದಾಗ ಪರದೇಶಿ । ಸತ್ತರ ।
ಯಾರೀಗಿ ದುಃಖ ಹಡೆದವ್ವ ॥

ತಂದಿ ನನ ಹಡೆದಪನ ಕುಂದೀನ ಮಗಳಲ್ಲ ।
ಮುಂಪ್ಯಾಗ ನಿಂತು ನಗಲಿಲ್ಲ । ನನ್ನೂರ ।
ಬಳಗಕ ಮಾತು ತರಲಿಲ್ಲ ॥

ಆಸರಕಿ ಅಳದಿಟ್ಟ ಬ್ಯಾಸರಕಿ ಬಳದಿಟ್ಟ ।
ಚಿಂತಿ ಕಾಲಾಗ ತುಳಿದಿಟ್ಟ । ಈ ದೇಹ ।
ಶೀಲ ಮಾಡಿಟ್ಟ ಜನದಾಗ ॥

ಆರ್‍ಯಾಣದಡವ್ಯಾಗ ಯಾರಾಣೆ ಕೊಡಲೆವ್ವ ।
ಸೂರ್ಯ ನಿನ್ನಾಣೆ ಶಿವನಾಣೆ । ಕೊಟ್ಟೇನ ।
ಆರ್ಯಾಣ ಗೆದ್ದು ಬರುವೇನ ॥

ಆ ಸತ್ತರಯ್ಯ್ಯಾನ ಬ್ಯಾಸತ್ತರಯ್ಯ್ಯಾನ ।
ನಾ ಸತ್ತರಯ್ಯ್ಯಾs ಅನಬ್ಯಾಡ । ಹಡೆದವ್ವ ।
ಹೆಣ್ಣೀನ ಜನುಮ ನೀಗೇನ ॥

ಕುದುರೆ ಮೇಲ್ ಬರುವವನು ಚದುರನೆಂಬುತಲಿದ್ದೆ ।
ಕವರುಗಾಲಿನ ಮದವಣ್ಣ । ನಮ್ಮನೇ ।
ಚವುರೆಗೆ ನೀನೆಲ್ಲಿ ದೊರಕಿದ್ಯೊ ॥

ಒಂಟೆ ಮೇಲ್ ಬರುವವನು ಬಂಟನೆಂಬುತಲಿದ್ದೆ ।
ಗಂಟುಗಾಲಿನ ಮದವಣ್ಣ । ನಮ್ಮನೇ ।
ಬಂಟೆಗೆ ನೀನೆಲ್ಲಿ ದೊರಕಿದ್ಯೊ ॥

ಹೆಣ್ಣೆತ್ತ ಮನೆಯು ಭಿನ್ನಭಕುತವಾದೋ ।
ಬಣ್ಣ ಬರೆದಿವ್ನಿ ನಡುಮನೆಗೆ । ತಾಯಮ್ಮ ।
ಬಣ್ಣ ನೋಡಿ ನಮ್ಮ ಮರೆಯುವ್ಮ ॥

ಅಂಡಗಾಲಿನವಳ ತಂದೆ ತುಂಡು ಮುಸುಡೆವಳ ತಂದೆ ।
ತೊಂಡೆಕಾಯಂಥ ತುಟಿಯುವಳ । ನೀ ತಂದು ।
ತಂಗಿಯರಿಗೆಲ್ಲಾ ಹಗೆಯಾದೆ ॥

ಮಾದೇವಿ ನೀ ತಂದೆ ಮುಸುಕಿನ ಜೋಳ ತಂದೆ ।
ಸ್ವಸ್ಥನಿರದೆ ಕಸಬರಲ । ನೀ ತಂದು ।
ತಂಗಿಯರಿಗೆಲ್ಲಾ ಹಗೆಯಾದೆ ॥

ತಾಟಗಿತ್ತಿ ತಂದೆ ತೋಟ್ದ ಬಸವಿ ತಂದೆ ।
ಮಾಟದ ಮಾರಿ ನೀ ತಂದೆ । ಅಣ್ಣಯ್ಯ ।
ತಂಗೇರಿಗೆಲ್ಲಾ ನೀ ಹಗೆಯಾದೆ ॥

ಹೋಗುವಾಗ ಹುಲ್ಲೆ ಕಂಡೆ ಬರುವಾಗ ಬಸವನ ಕಂಡೆ ।
ತವರೂರು ದಾರೀಲಿ ಏಳ್ತಾವ । ಸರ್ಪ ಕಂಡೆ ।
ಹಿಂದಿರುಗಿ ಬಂದೆ ಅತ್ತೆವ್ಮ ॥

## ಸತಿಪತಿ

ಅಡಗೀಯ ಮನಿಯಾಗ ಮಡದೀಯ ಸುಳುವಿಲ್ಲ ।
ಅಡಗಿ ಬಾಯಿೀಗಿ ರುಚಿಯಿಲ್ಲ । ಹಡೆದವ್ವ ।
ಮಡದಿ ತವರೀಗಿ ಹೋಗ್ಯಾಳ ॥

ಹಚ್ಚಡದ ಪದರಾಗ ಅಚ್ಚ ಮಲ್ಲಿಗಿ ಹೂವ ।
ಬಿಚ್ಚಿ ನನ ಮ್ಯಾಲ ಒಗೆವಂಥ । ರಾಯರನ ।
ಬಿಟ್ಹ್ಯಾಂಗ ಬರಲೆ ಹಡೆದವ್ವ ॥

ಗಂಡಹೆಂಡರ ಜಗಳಾ ಗಂಧ ತೀಡೀಧಾಂಗ ।
ನಿಂಗಕ ನೀರು ಎರೆದಾಂಗ । ಹಿರಿಹೊಳೆಯ ।
ಗಂಗವ್ವ ಸಾಗಿ ಹರಿದಾಗ ॥

ಊರೀಗಿ ಹೋಗವರ ಮಾರ್ಯಾಕ ಬಾಡ್ಯಾವ ।
ಗೀರಗಂಧ್ಯಾಕ ಬೆವತಾವ । ಮಡದೀನ ।
ಬಿಟ್ಟ ಹೊಂಟಾರ ಪರನಾಡ ॥

ಎಂದ ಬರತಿರಿ ನನ್ನ ಗಂಧದ ರತಿಗಾರ ।
ರುಮ್ಮಾಲ ಎಲ್ಲ ಪರಿಮಳ । ನನ ನಲ್ಲ ।
ಎಂದ ಬರತೀರಿ ನನಗ್ಹೇಳ ॥

ಕಮಳದ ಹೂ ನಿನ್ನ ಕಾಣದೆ ಇರಲಾರೆ ।
ಮಲ್ಲೀಗೆ ಮಾಯೆ ಬಿಡಲಾರೆ । ಕೇದಿಗೆ ।
ಗರಿ ನಿನ್ನನಗಲಿ ಇರಲಾರೆ ॥

ಯಾಕವ್ವ ನನ ಜೀವ ಜಾಚೇಲಿವಲ್ಲದ ।
ಜಾತ್ರಿಗ್ಹೋದವರು ಬರಲಿಲ್ಲ । ಇಂದೀನ ।
ರಾತ್ರಿ ಹ್ಯಾಂಗಾರೆ ಕಳೆಯಲೆ ॥

ಹಣಚಿಬಟ್ಟಿನ ವ್ಯಾಲ ಹರಿದಾಡು ಕುಂಕುಮ ।
ಪಾರೀಗಿ ಪುರುಷ ಇದರೀಗಿ । ಕುಂತರ ।
ಹೆಚ್ಚಿನ ತವರ ಮರತೇನ ॥

ಎಲ್ಲೆಲ್ಲಿ ನೋಡಿದರ ನಲ್ಲನಂಥವರಿಲ್ಲ ।
ಹಲ್ಲು ನೋಡಿದರ ಹವಳವ । ನಲ್ಲನ ।
ಸೊಲ್ಲು ಕೇಳಿದರ ಸಮಧಾನ ॥

ಎರಿಹೆಂಟಿ ಬರಿಗಾಲ ನಡುವೆ ನೆಗ್ಗಿಲಮುಳ್ಳು ।
ರಾಯ ನಿಮ ಖಳುವಿ ಬರುವಾಗ । ಹಿಂದೀನ ।
ನೆನಪಾಗಿ ಜೀವ ಹೋದೀತ ॥

ಸರದಾರ ನಿಮ್ಮಿಂದ ಸರುವೆಲ್ಲ ಮರತೇನ ।
ಸರವಾಗ ಇರುವ ಗುಳದಾಳಿ । ನಿಮ್ಮಿಂದ ।
ಸರುವ ಬಳಗೆಲ್ಲ ಮರತೇನ ॥

ಅರಗಿನಂಥಾ ನಲ್ಲ ತಿರುಗಿ ಬಾರದೆ ಹೋದಾ ।
ಅರಗಿಣಿ ಹೋಗಿ ಕರತಾರ । ನಗರದ ।
ದರಬಾರದಾಗ ಇರತಾರ ॥

ಪಾರೀಗಿ ಪುರುಷರು ಊರೀಗಿ ಹೋದರ ।
ನಾರಿ ನಿನ ಕಣ್ಣು ಒಳಹೊರಗ । ತಿಂಗಳದ ।
ಚಂದ್ರಾಮರ್‍ಯಾಗ ತಡದಾರ ॥

ಹಾಸೀಗಿ ಹಾಸೆಂದಾ ಮಲ್ಲೀಗಿ ಮುಡಿಯೆಂದಾ ।
ಬ್ಯಾಸತ್ತರ ಮಡದಿ ಮಲಗೆಂದಾ । ನನ ರಾಯಾ ।
ತನ ನೋಡಿ ತವರ ಮರಿಯೆಂದಾ ॥

ಮಡದೀನ ಬಡಿದಾನ ಮಳದಾಗ ಮರಗ್ಯಾನ ।
ಒಳಗ್ಹೋಗಿ ಸೆರಗ ಹಿಡಿಯೂತ । ಕೇಳ್ಯಾನ ।
ನಾ ಹೆಚ್ಚೊ ನಿನ್ನ ತವರೆಚ್ಚೊ ॥

ಸಿರಿಗಂಧದ ಚಿಕ್ಕ ವಡೆದು ವತ್ತಲ ತುಂಬಿ ।
ತಿರುಗಾಡಿ ನೀರ ಬೆರಸೇನ । ನನ ಮನಿಗಿ ।
ಹಿಡಿ ಹೊನ್ನು ತರುವ ಹಿರಿಯರಿಗೆ ॥

ಹಿಂಡು ಮಂದ್ಯಾಗಿರುವ ಪುಂಡ ಊಟಕೆ ಬಂದ್ರು ।
ದುಂಡಕ್ಕಿ ಬಾನ ಕುದಿಯಾವ । ರಾಯರ ।
ಪುಂಡಾಟದಾಟ ಹಿಡಿಲಾರೆ ॥

ಗಂಧೆಣ್ಣಿ ಹಚಗೊಂಡು ಗಂಗ್ಯಾಗ ನಿಂತಾರ ।
ಒಂದೊಂದು ಹೇಳಿ ನಗತಾರ । ರಾಯರಿಗೆ ।
ಎಂಥ ಸಿರಿಗಂಗಿ ಹಡೆದಾಳ ॥

ಅರಸ ಒಳ್ಳೆವರಂತ ವಿರಸವಾಡಲಿ ಬ್ಯಾಡ ।
ವರುಷದ ಮಾತು ಮನದಾಗ । ಇಟಗೊಂಡು ।
ಪರಸಿಗ್ಹೋದಲ್ಲಿ ತಗೆದಾರ ॥

ಸರಕಾರಕ್ಹೋಗವರ ಸೆರಗ್ಹಿಡಿದು ತರಬೇನ ।
ಸರದಾರೆ ಕೇಳ್ರಿ ನನ ಮಾತ । ನನ ರಾಯ ।
ಸರಗೀಯ ಕೊಂಡಿ ಸಡಲ್ಯಾವ ॥

ಅತ್ತಿ ಹೂವಿನ ಸೀರಿ ಅಚ್ಚೇರಿನ ವಂಕಿ ।
ಇಚ್ಚೆಯವರಲ್ಲ ಮನಿಪುರುಷ- । ರ ಕೂಡ ।
ಹೆಚ್ಚು ಮಾತಾಡಿ ಫಲವೇನ ॥

ಕಟ್ಟಾಣಿ ಗುಂಡೀಗಿ ಸಿಟ್ಟುಮಾಡಲಿಬ್ಯಾಡ ।
ಬಿಟ್ಟು ಬಂದೀದ ಬಳಗೆಲ್ಲ । ಪತಿಪುರುಷ ।
ಕಟ್ಯಾರ ತಮ್ಮ ಪದರಾಗ ॥

ಅತ್ತೆ ಅತ್ತೀಕಾಯಿ ಮಾವ ಮಲ್ಲಿಗ್ಹೂವ ।
ಭಂಗಾರಗೋಲ ಹಿರಿ ಭಾವ । ನನ ಮನಿಯ ।
ಅರಿಸೀಣ ಕೆನಿಯು ಅರಸರು ॥

ಬಟ್ಟಲಗಣ್ಣೀಲಿ ದಿಟ್ಟೀಸಿ ನೋಡ್ಯಾರ ।
ಸಿಟ್ಯಾಕೊ ರಾಯ ನನ ಮ್ಯಾಲ । ನಾ ಅಂಥ ।
ಹುಟ್ಟಿಸ್ಯಾಡವರ ಮಗಳಲ್ಲ ॥

ರಾಯ ಬರತಾರಂತ ರಾತ್ರೀಲಿ ನೀರಿಟ್ಟ
ರನ್ನ ಬಚ್ಚಲಕ ಮಣಿ ಹಾಕಿ । ಕೇಳೀನ ।
ಸಣ್ಣವಳ ಮ್ಯಾಲ ಸಂವತ್ಯಾಕ ॥

ಅಂಗೀಯ ಮ್ಯಾಲಂಗಿ ಛಂದೇನೊ ನನ ರಾಯ ।
ರಂಬಿ ಮ್ಯಾಲ ರಂಬಿ ಪ್ರತಿ ರಂಬಿ । ಬಂದರ ।
ಛಂದೇನೊ ರಾಯ ಮನಿಯಾಗ ॥

ವಾರೀಗಿ ರಾಯರು ಊರೀಗಿ ಹೋದರ ।
ಸೇರ ಭಂಗಾರ ತೆಗೆದಂಗ । ಮಲ್ಲೀಗಿ ।
ಮುಡಿದು ಅಂಗಳಕ ಒಗೆದಂಗ ॥

ಹೇಸಿ ನಿನ ಬದುಕೀಗಿ ಆಶೆ ನಾ ಮಾಡಿಲ್ಲ ।
ರೇಸೀಮಿ ಉಡುವ ಧೊರಿ ನನ್ನ । ರಾಯರ ।
ಆಶೆ ಮಾಡೇನ ಅನುಗಾಲ ॥

ಬಾಳಿ ಬಾಗ್ಯಾಡತಾವ ತೆಂಗು ಜೋಲ್ಯಾಡತಾವ ।
ಮೇಲ್ಯಾಡತಾವ ಗಜನಿಂಬಿ । ಬನದಾಗ ।
ಪಗಡಿ ಆಡ್ಯಾರ ನನ ರಾಯ ॥

ಚೆಂದರಾಮನ ಚಿಕ್ಕಿ ಇಂಬಾಗಿ ಇರಲೆವ್ವ ।
ರಂಬೀಗಿ ರಾಯ ವರನಾಗಿ । ಇದ್ದರ ।
ಭಂಗಾರನ್ಯಾಕ ಇಡಬೇಕ ॥

ಸಾರಿಸಿದ ಮನಿಯಾಗ ಏರಿಸೀದಡಕಲ ।
ವಾರೀಗಿ ರಾಯ ಒಳಹೊರಗ । ಸುಳಿದರ ।
ವಾಲೀಗಿ ವಜ್ರ ಜಡಿದ್ಹಾಂಗ ॥

ಎಲ್ಲೆಲ್ಲಿ ನೋಡಿದರ ನಲ್ಲನಂಥವರಿಲ್ಲ ।
ದಂಡಿನಾಗವರ ದನಿಯಿಲ್ಲ । ನಲ್ಲನ ।
ಸೊಲ್ಲ ಕೇಳಿದರ ಸನುಮಾನಿಕೆ ॥

ಹೋಗುವ ರಾಯರ ಹೋಲಿಕಿ ನೋಡೀನ ।
ಕಾಲ ಹಿಂಬಡಕ ಕಮಲವು । ಭೆಂಜೀಯ ।
ಚೆಂದರನಕಿಂತ ಬಲು ಚೆಲುವ ॥

ರಾಯ ನಿಮಕಿಂತ ಭಾರಿ ಗುಣದವರಿಲ್ಲ ।
ಭಾಳ್ಹೇಳಿಕೊಂಡ ಬಳಗಕ । ನಿಮ ಸಿಟ್ಟು ।
ತಾಳಿಕೋರಿ ರಾಯ ಕಡೆತನಕ ॥

ಹಾಸೀಗಿ ಹಾಸೆಂದ್ರು ಮಲ್ಲೀಗಿ ಮೂಸೆಂದ್ರು ।
ನಿಂತು ನೂರೆಲಿಯ ಮಡಿಚೆಂದ್ರು । ರಾಯರಿಗೆ ।
ಎಂಥ ಸಿರಿಗಂಗಿ ಹಡೆದಾಳ ॥

ಹಾಸಿದ್ಹಾಸಿಗಿ ಬಿಟ್ಟು ಹಾದೀಗಿ ಮಲಗ್ಯಾರ ।
ಸೂಸಗಾಳೀಗಿ ಬಳಕೂವ । ರಾಯರಿಗಿ ।
ಏಸು ಬಾರಿ ಕಾಲ ಹಿಡಿಯಾಲೆ ॥

ಕಾಜೀನ ಖಂಬಕ ಮೋಜಿಲಿ ನಿಂತಾರ ।
ಒಂದೊಂದು ಹೇಳಿ ನಗತಾರ । ರಾಯರಿಗಿ ।
ಎಂಥ ಸಿರಿಗಂಗಿ ಹಡೆದಾಳ ॥

ರಾಜ ಅಂಗಳದಾಗ ರಾಯರ ಸುಳುವಿಲ್ಲ ।
ಪಾಗದಾಗವರ ಕಾಣದುರಿಲ್ಲ । ನನ ಬಾಳಾ ।
ಹೋಗಿ ಬಾ ಅವರ ಸದರೀಗಿ ॥

ಸೋಲ್ಹಾಪ್ರದ ಸೆಲ್ಲೆ ಆದಕ ಮುತ್ತಿನ ಗೊಲ್ಲೆ ।
ಬಿಚ್ಚಿ ನನ ಮ್ಯಾಲ ಒಗೆವಂಥ । ರಾಯರಿಗಿ ।
ಬಿಟ್ಹಾಂಗ ಬರಲೆ ಹಡದವ್ವ ॥

ಸುಣ್ಣ ಇಲ್ಲದ ಗೋಡಿ ದೇವರಿಲ್ಲದ ಜಗಲಿ ।
ಅರಸರಿಲ್ಲದ ಮನೆತನ । ಮಾಡೂದು ।
ಯಾತರ ಸುಖವು ಹಡೆದವ್ವ ॥

ಗಂಡ ಪಂಡಿತರಾಯಾ ರಂಡೀಯು ಮಾಡಿದರ ।
ಭಂಡ ಮಾಡಿವರ ಮಗಳಲ್ಲ । ಕೊರಳಾನ ।
ಗುಂಡು ಬೇಡಿದರ ಕೊಡುವೇನ ॥

ಕೂಲಿ ಮಾಡಿದರೇನ ಕೋರಿ ಹೊತ್ತರೇನ ।
ನಮಗ ನವು ರಾಯ ಬಡವೇನ । ಬಂಗಾರ ।
ಮಾಲ ಇದ್ದಾಂಗ ಮನಿಯಾಗ ॥

ಕಡಗದ ನನ ಕೈಯ ಬಿಡು ನನ್ನ ಮಾರಾಯಾ ।
ಕದನ ಬಂದಾವು ನಮನಿಮಗ । ವೀಳ್ಯವ ।
ಮಡಚಾಗ ಕಂಡೆ ನಿಮ ಮನವ ॥

ಎಲ್ಲಿ ಹೋಗಿದ್ದಿ ರಾಯ ಸೆಲ್ಲ್ಯಾಕ ಮಾಸ್ಯಾದ ।
ಅಲ್ಲೊಬ್ಬಳ ಕೂಡ ಸಲಗೀಯು । ನೀವ್ ಮಾಡಿ ।
ಇಲ್ಲೆಂಬುದೇನ ನನ ಮುಂದ ॥

ಅತ್ತಿ ನಿಮ್ಮೊಟ್ಟೆವರು ಅಸಲ ಪಂಡಿತರಾಯ ।
ಬಿಸಿಲ್ಹತ್ತಿ ಕುದುರಿ ಇಳಿದಾರ । ಅಣ್ಣನ ।
ಎಸಳ ಯಾಲಕ್ಕಿ ಬನದಾಗ ॥

ಅರಸರ ದಯದಿಂದ ಅರಸೀಣ ಕುಂಕೂಮ ।
ಗೋದ ಮಲ್ಲೀಗಿ ನನೆದಂಡಿ । ಕಟ್ಟೂದು ।
ಅರಸ ಮಾರಾಯ್ರ ದಯದಿಂದ ॥

ಆರು ಸೇರಿನ ಸರಗಿ ಅರಗಿಲ್ಲದ ಕಟ್ಟಾಣಿ ।
ನತ್ತು ಬೇಡಿದರ ನಗುವಂಥ । ರಾಯರನ ।
ನಿಂತ ಬೇಡೀನ ಶಿವನಲ್ಲಿ ॥

ಹಣಚಿಬಟ್ಟಿನ ಕೈಯ ಒತ್ತಿ ಹಿಡಿಯಲಿ ಬ್ಯಾಡ ।
ನೆತ್ತರಿಳಿದಾವು ಬೆರಳೀಗಿ । ನನ ರಾಯ ।
ಅತ್ತಿ ಬೈದಾಳು ಕೈಬಿಡೊ ॥

ಯಾಲಕ್ಕಿ ಕಾಯಽ ಸುಲಿದು ಯಾವಡಗಿ ಮಾಡಲಿ ।
ಊರಿಗ್ಹೋಗ್ಯಾರ ರಾಯರು । ಬಾರದೆ ।
ಯಾವಡಿಗಿ ಮಾಡಿ ಫಲವೇನ ॥

ಸಿಟ್ಟು ನಾ ಆದೇನ ಶ್ರೀಹರಿ ನಿನ ಮ್ಯಾಲ ।
ಉಚ್ಚಿ ಒಗದೇನ ರುಳಿ ಸರಗಿ । ಗೋಕುಲನ ।
ಕೃಷ್ಣ ನನ ಮ್ಯಾಲ ಮುನಿದೇನ ॥

ಎಲ್ಲಿ ಹೋಗಿದ್ದಿ ನನ್ನ ಮಲ್ಲಿಗೆಂಥಾ ರಾಯಾ ।
ಎಲ್ಲಾರು ನನ್ನ ಬೈದಾರು । ಆ ಕತಿಯ ।
ನಿಲ್ಲೀಸಿ ಕೇಳು ನಿನ ಕಃದಃರಿ ॥

ಕಾಜಿನ ಕಂಬಕ ಮೋಜೀಲೆ ನಿಂತಾರ ।
ಊದೀನ ಕಡ್ಡಿಂಗ ಬಳಕೂವ । ದೊರಿಗೂಡ ।
ಬದುಕು ಮಾಡೂದ ಬಹು ಚೆಂದ ॥

ಊರ ಮುಂದಿನ ಹಳ್ಳ ಕುಸಬಿ ಬಡಿದರ ಜೊಳ್ಳ ।
ಗಲ್ಲದ ಮ್ಯಾಲ ಕಿರಿಬಳ್ಳ । ಇಟಗೊಂಡು ।
ನಲ್ಲsನ ಕೂಡ ನಕಲೀಯ ॥

ಗಂಡ ಹೆಂಡಿರ ಜಗಳ ಉಃಡು ಮಲಗುವತನಕ ।
ಲಿಂಗದ ನೀರು ಹರಿದ್ಹಾಂಗ । ಹಿರಿ ಹೊಳಿಯ ।
ಗಂಗವ್ವನ ಕೂಡಿ ನಲಿದ್ಹಾಂಗ ॥

ಮಾರೀಗಿ ರಾಯರು ಊರೀಗಿ ಹೋದರ ।
ದಾರಿಗುಂಟಾವ ನನ ಕಣ್ಣ । ಮನಿಯಃನ ।
ದೇವರಿನ್ನೂ ಯಾಕಃ ಬರಲಿಲ್ಲ ॥

ಒಕ್ಕಲಿಗನ ಹುಡುಗನ ಒಲ್ಲೆ ನಾ ಕಾಣಮ್ಮ
ಎಕ್ಕೆಯ ಸಾಲಿಗೆ ಮಾನೆಮಾರು । ಮಾಡ್ಕೊಂಡು ।
ದುಃಖ ಮಾಡವ್ನೆ ಕಣದಲ್ಲಿ ॥

ಅಗಸರ ಹುಡುಗನ ಒಲ್ಲೆ ನಾ ಕಾಣಮ್ಮ
ಕಣಕಾಲು ಮೊಣಕಾಲು ಮೈಲಿಗೆ । ಮಾಡ್ಕೊಂಡು ।
ತಿಣಕಾಡ್ತ ಬಟ್ಟೆ ಒಗೆವಾನು ॥

ಒಡ್ಡಾರ ಹುಡುಗನ ಒಲ್ಲೆ ನಾ ಕಾಣಮ್ಮ ।
ಗದ್ದಾಲಿ ಚವಿಕೆ ಹೆಗಲ್ಮೇಲೆ । ಇಟಗೊಂಡು ।
ಗುದ್ದಾಡಿ ಮಣ್ಣ ಕಡದಾನು ॥

ಕೂಡಿದರೆ ಕೂಡಬೇಕು ಬೇಡಾರ ಹುಡುಗನ ।
ಪಾವುಡದ ಚುಂಗು ಮೊಳದುದ್ದ । ಬಿಟುಕೊಂಡು ।
ಓಡ್ಹೋಗೋ ಮೊಲನ ಜಡುದಾನ ॥

## ಬಸುರೆ - ಬಾಣಂತಿ

ಆಡು ಮಕ್ಕಳ ಕಂಡು ಬೇಡಿತ್ತ ನನ ಜೀವ ।
ಕೇಳಿದ್ದನೇನ ಶಿವರಾಯ । ಹೊಟ್ಟ್ಯಾಗ ।
ಮೂಡಿದ್ದನೇನ ಮಗರಾಮು ॥

ನಾಕು ತಿಂಗಳ ಬಸರ ನಾ ಕೇಳಿ ನೀ ಕೇಳಿ ।
ನೀರಹೊಳಿ ಕೇಳಿ ನಿಜವಾಗಿ । ಮನಿಯಾನ ।
ಮಾವ ಕೇಳಿ ಹೂವ ಮುಡಿಸ್ಯಾರ ॥

ಮಾವೀನ ಮಿಡಿ ತಂದು ಮಾವ ಉಡಿಯಾಗ್ಹಾಕಿ ।
ಮಾಯಾದ ಮಕ್ಕಳ್ಹಡಿಯೆಂದು । ಹಿಗ್ಗೀಲಿ ।
ಮಾವ ಬಂದ್ಲರಕಿ ಕೊಡತಾರ ॥

ಕಂದ ಹುಟ್ಟುವಾಗ ಕುಂದ್ಯಾವಕ್ಕನ ಮಾರಿ ।
ಕಂದ ಚಂಡಾಡಿ ಬರುವಾಗ । ಆ ಮಾರಿ ।
ಕುಂದಲ್ಹರಳಾಗಿ ಹೊಳದಾವ ॥

ದೇವರ ಮನಿಯಾಗ ಜೋಡೆರಡು ದೀವಿಗಿ ।
ದ್ವಾರೇದ ಕೈಯ ತೆಲಗುಂಬ । ಇಟಗೊಡು ।
ಕಂದನ ಹಡೆದು ಮನಗ್ಯಾಳ ॥

ಬ್ಯಾನೀಯ ತಿನುವಾಗ ಬ್ಯಾಡವ್ವ ಮಕ್ಕಳು ।
ಬಾಗಿ ಬಚ್ಚಲ ಹೊಗುವಾಗ । ಬಯಸ್ಯಾರ ।
ನೂರೊಂದು ಫಲವ ಕಡು ಶಿವನೆ ॥

ಬಸಿರ ಬಯಕೆ ಚಂದ ಹಸಿರು ಕುಪ್ಪಸ ಚಂದ ।
ನಸುಗೆಂಪಿನವಳ ನಗೆ ಚಂದ । ಅಕ್ಕಯ್ಯ ।
ಬಸುರಾದರೆ ಚಂದ ಬಳಗಕ ॥

ಬಾಲನ ಹೆರುವಾಗ ಬಾಡಿತವ್ಮನ ಮೊಗ ।
ಬಾಲ ಚಂಡಾಡಿ ಬರುವಾಗ । ಅವ್ಮನ ಮೊಗ ।
ಕುಂದಣದ ಚಿನ್ನ ಹೊಳೆದಂಗ ॥

ಬಾಣಂತಿ ಮನೆ ಮುಂದೆ ಹೋಗಿ ಬಾ ಅಣ್ಣಯ್ಯ ।
ಮತ್ತೊಂದು ತಮಟೀಯ ಹೋಯ್ಸೀವೆ । ನಿನ ಕಂಡು ।
ಭಾಗಾದಿ ಬಾಯಿ ಬಿಡುವಳ ॥

ಯಾರೂ ಕಾಣದ ಹಾಗೆ ಯಾರು ಕೇಳದ ಹಾಗೆ ।
ನಾರಿ ತನ ತಂಗಿ ಪುರುಷರಿಗೆ । ಬಸುರೆಂದು ।
ಭೋರೆಂಬ ಧಾರೆ ಎರಸ್ಯಾರೆ ॥

# ಲಾಲಿ

ಆಡಕಿ ಸುತ್ತ್ಯಾಗ ಆಡ್ಯಾಳ ಡೊಂಬೂತಿ ।
ನೋಡಿ ಬಂದಣ್ಣ ಉಣವೊಲ್ಲ । ಡೊಂಬೂತಿ ।
ನಾಳೆ ಬಂದಾಡ ನವಿಲಾಟ ॥

ಕರಿಯಂಗಿ ಕಸೂತಿ ತಲೆತುಂಬ ಜಾವೂಳ ।
ಅಂಗಳದಾಗ ನವಿಲಾಟ । ಅದಕಿಂತ ।
ರಂಗಯ್ಯನಾಟ ವಿಪರೀತ ॥

ಜೋಗೂಳ ಹಾಡಿದರ ಆಗಳೇ ಕೇಳ್ಯಾನ ।
ಹಾಲ ಹಂಬಲ ಮರತಾನ । ಕಂದೈಗ ।
ಜೋಗೂಳದಾಗ ಅತಿ ಮುದ್ದ ॥

ಯಾತಕಳುತಾನೆಂದು ಎಲ್ಲಾರು ಕೇಳ್ಯಾರ ।
ಕಾಯದ ಹಾಲ ಕೆನಿ ಬೇಡಿ । ಕಂದಯ್ಯ ।
ಕಾಡಿ ಕೈಬಿಟ್ಟು ಇಳಿಯಾನ ॥

ಅತ್ತ್ಯಾನ ಕಾಡ್ಯಾನ ಮತ್ತೇನು ಬೇಡ್ಯಾನ ।
ಮೆತ್ತಮೆತ್ತನ ಧಿಮುಕವ । ಕೊಟ್ಟರ ।
ಗಪ್ಪಚಿಪ್ಪಾಗಿ ಮಲಗ್ಯಾನ ॥

ಅಳುವ ಕಂದನ ತುಟಿಯು ಹವಳದ ಕುಡಿಯಂಗ ।
ಕುಡಿಹುಬ್ಬು ಬೇವಿನೆಸಳಂಗ । ಕಣ್ನೋಟ ।
ಶಿವನ ಕೈಯಲಗು ಹೊಳೆದಂಗ ॥

ಕಾಡಿಗ್ಹಚ್ಚಿದ ಕಣ್ಣು ತೀಡಿ ಮಾಡಿದ ಹುಬ್ಬು ।
ಮಾವಿನ ಹೋಳು ನಿನ ಕಣ್ಣು । ಕಂದಯ್ಯ ।
ಮಾವ ಬಣ್ಣೇಸಿ ಕರವಾನ ॥

ಕೂಸೊಂದು ಕುಂದಣ ಏಸೊಂದು ಜಾವೂಳ ।
ದೇಶಕ್ಕ ಜಾಣ ಅಗಸಾಲಾ । ಮಾಡ್ಯಾನ ।
ಕೂಸ ಕಂದಯ್ಯನರಳೇಲೆ ॥

ತೊಟ್ಟೀಲದಾಗೊಂದು ತೊಳದ ಮುತ್ತಿನ ಕಂಡೆ ।
ಹೊಟ್ಟಿ ಮ್ಯಾಲಾಗಿ ಮಲಗ್ಯಾನ । ಕಂದೈಗ ।
ಮುತ್ತಿನ ದೃಷ್ಟಿ ತಗೆದೇನ ॥

ಹವ್ವಲ್ಲೆ ಎಂದರ ಹೋಗೋನು ತಿರಿಗ್ಯಾನ ।
ಎಲ ನಿನ್ನನ್ಯಾರು ಕರದಾರ । ನಾವ್ ನಮ್ಮ ।
ಗಿಣಿರಾಮನನ್ನ ಕರದೇವ ॥

ಅತ್ತರ ಅಳಲೆವ್ವ ಈ ಕೂಸು ನನಗಿರಲಿ ।
ಕೆಟ್ಟರ ಕೆಡಲಿ ಮನಿಗೆಲಸ । ಕಂದನಂಥ ।
ಮಕ್ಕಳಿರಲೆವ್ವ ಮನಿತುಂಬ ॥

ಹಾರೈಸಿ ಹಡೆದವ್ವ ಒಳಗೇನು ಮಾಡೂತಿ ।
ನೋಡು ಬಾ ತಾಯಿ ಮಗನಾಟ । ನನ ಬಾಲ ।
ಗುಲಗಂಜಿ ಗಿಡಕ ಗುರಿಯಿಟ್ಟಾ ॥

ಆಡಿ ಬಾ ಎನ ಕಂದಾ ಅಂಗಾಲ ತೊಳದೇನ ।
ತೆಂಗೀನಕಾಯಿ ತಿಳಿನೀರ । ತಕ್ಕೊಂಡು ।
ಭಂಗಾರ ಮಾರಿ ತೊಳದೇನ ॥

ಬಾರಯ್ಯ ಬಾ ನನ್ನ ಬಾಲ ಚಕ್ರಾವರ್ತಿ ।
ನಾಲೀಗಿ ಮ್ಯಾಲ ಸರಸೋತಿ । ಇರುವಂಥ ।
ನನ ಬಾಲ ಹಾಲ ಕುಡಿ ಬಾರೊ ॥

ಅಳದೀರೊ ಅಣ್ಣಯ್ಯಾ ನಿನಗೊಂದು ಹೇಳುವೆನು ।
ಅಮರವತಿಯೆಂಬ ಎಳೆದೋಟ- । ದೊಳಗೀನ ।
ಅರಗಿಳಿಯ ತಂದು ಕೊಡುವೇನ ॥

ಕೂಸು ನನ ಕಂದಯ್ಯ ಕೇಸ ಬಿಟ್ಟ್ಯಾಡಾಗ ।
ದೇಶದಿಂದೆರಡು ಗಿಣಿ ಬಂದು । ಕೇಳ್ಯಾವ ।
ಕೂಸ ನೀ ದಾರ ಮಗನೆಂದು ॥

ತೋಳುದ್ದ ತಲೆಗಿಂಬು ಮಾರುದ್ದ ಹಾಸೀಗಿ ।
ಮಾಣಿಕದಂಥ ಮಗ ಮುಂದ । ಮಲಗಿದರ ।
ಮಾರಾಯ್ರು ಗೊಡವೆ ನನಗೇನ ॥

ಗಂಡಹೆಂಡರ ಜೋಡು ದುಂಡುಮುತ್ತಿನ ಜೋಡು ।
ಗಂಡೆರಳಿ ಜೋಡು ಅಡವ್ಯಾಗ । ನನ ಬಾಲಾ ।
ನೀ ಜೋಡೊ ನನಗೆ ಮನಿಯಾಗ ॥

ಬಾಲ ಹನುಮನ ಮುಂದ ಬಾಗಿ ಚಂಡಾಡ್ಯಾನ।
ಬಾವೂಲಿಗಿವಿಯ ನನ ಬಾಲ । ಕಂಡರ ।
ಬಾಲ್ಯಾರು ಬಸಿರು ಬಯಸ್ಯಾರ ॥

ಹಿಂಡ ಮಕ್ಕಳೊಳಗ ಪುಂಡ ನನ ಕಂದಯ್ಯ
ದುಂಡಮಲ್ಲೀಗಿ ಮರನೇರಿ । ಹೂಕೊಯ್ದಾ ।
ಗಂಡುಳ್ಳ ಬಾಲಿ ತುರಬೀಗಿ ॥

ಚಿಕ್ಕ ನನ ಕಂದಯ್ಯ ಚಿಣಿದಾಂಡು ಆಡ್ಯಾನ ।
ಚಿಕ್ಕ ಹೊಳಿ ದಾಟಿ ತೊರೆಗಲ್ಲ । ಬಾಲ್ಯಾರ ।
ಚಿತ್ರದ ಕೊಡಕ ಚಿಣಿ ಬಡೆದ ॥

ತಾಯಿದ್ರು ತವರ್ಹೆಚ್ಚು ತಂದಿದ್ರ ಬಳಗ್ಹೆಚ್ಚು ।
ಸಾವಿರಕೆ ಹೆಚ್ಚು ಪತಿಪುರುಷ । ಹೊಟ್ಟೀಯ ।
ಮಾಣಿಕದ ಹರಳು ಮಗ ಹೆಚ್ಚು ॥

ಸಕ್ಕರಿ ಸವಿಗಾರಾ ವೀಳ್ಯದ ರುಚಿಗಾರಾ।
ವೀರಭದ್ರನ ಅವತಾರ । ನನ ಮಗನ ।
ಹ್ಯಾಂಗ ಸಂಬಸಲಿ ಹಡೆದವ್ವ ॥

ಗಾಳಿದೇವರ ಗೂಡ ಧೂಳಿದೇವರ ಬಂದಾ ।
ಆಕಳ ಹಿಂದ ಕರ ಬಂದಾ । ನನ ಮನಿಯ ।
ಮಾರಾಯರ ಹಿಂದ ಮಗ ಬಂದಾ ॥

ಬಂಗಾರ ಬಾವೂಲಿ ಜಗ್ಗಿ ಬಿದ್ದಾವ ಜೋಲ ।
ಲಗ್ಗಿ ಹೊಡ್ಡ್ಯಾನ ನಡು ಓಣಿ । ನನ ಬಾಳ- ।
ನಬ್ಬರಣಿ ಕೇಳ ಹಡೆದವ್ವ ॥

ಹಾಲ ಬೇಡ್ಕತ್ತ್ಯಾನ ಕೋಲು ಬೇಡಿ ಕುಣದಾನ ।
ಮಸರ ಬೇಡಿ ಕೆಸರು ತುಳಿದಾನ । ಕಂದಯ್ಯನ ।
ಕುಸುಲದ ಗೆಜ್ಜಿ ಕೆಸರಾಯ್ತು ॥

ಗುಜ್ಜ ನನ ಕಂದಯ್ಯನ ಗೆಜ್ಜಿಸಪ್ಪಳ ಕೇಳಿ ।
ನಿಬ್ಬಣದೆತ್ತು ಬೆದರ್ಯಾವ । ಬೆಟ್ಟ ಸೇರಿ ।
ಮದ್ಯಾಣ ಮೇವ ಮರತಾವ ॥

ಎಲ್ಲ್ಯಾರೆ ಇರಲೆವ್ವಾ ಹುಲ್ಲಾಗಿ ಬೆಳೆಯಲಿ ।
ನೆಲ್ಲಿಬಡ್ಡ್ಯಾಗಿ ಚಿಗಿಯಲಿ । ಕಂದಯ್ಯ ।
ಜಯವಂತನಾಗಿ ಬೆಳೆಯಲಿ ॥

ಕೂಸು ಇದ್ದ ಮನಿಗೆ ಬೀಸಣಿಕೆ ಯಾತಕ ।
ಕೂಸು ಕಂದಯ್ಯ ಒಳಹೊರಗ । ಆಡಿದರ ।
ಬೀಸಣಿಕೆ ಗಾಳಿ ಸುಳಿದಾವ ॥

ಹಾಲ ಕುಡಿಯೊಂದರ ಹನ್ನೆರಡು ಬಟ್ಟಲ ।
ಕೀಲ ರಂಜಣಿಗಿ ಗಿರಿಸಿಂಪಿ । ಕಂದಗ ।
ಹಗಲೆಲ್ಲಿ ತರಲಿ ನೊರೆಹಾಲ ॥

ಕಿರಿಕೇರಿ ಕಂದಗ ಬೆರಕೀಗಿ ನೀರಿಲ್ಲ ।
ಸರಕಾರದಗಸಿ ತೆರೆದಿಲ್ಲ । ಕಂದನ ।
ದನಿ ಕೇಳಿ ಅಗಸಿ ತೆರದಾವ ॥

ತೊಟ್ಲಾನ ಕೂಸೀಗಿ ದಿಟ್ಟಿಯಾದಾವಂದ ।
ಕಟ್ಟೀದ ನವಿಲ ಗರಿಗೋಳ । ಬಾಳಾಗ ।
ಕರಿಬೇವಿನ ದೃಷ್ಟಿ ತಗೆದೇನ ॥

ಆಕಳ ಕರ ಬಿಟ್ಟು ನಾಕು ಮೂಲಿಗಿ ನಿಂತ ।
ಯಾಕೆ ಗೋಪೆವ್ವ ತೊರೆವಲ್ಲೆ । ನನ ಕಂದ ।
ಹಾಲಿಲ್ಲದೆ ಬೋನ ಉಣವೊಲ್ಲ ॥

ಹಾಲ ಕಾವೂ ಚಿಂತಿ ಬಾಲ ಮಲಗೂ ಚಿಂತಿ ।
ಇನ್ನ್ಯಾರ ಚಿಂತಿ ನಮಗವ್ವ । ನನ ಗೆಳದಿ ।
ಮಗ ಬರುವ ಚಿಂತಿ ಮನದಾಗ ॥

ಹೆಣ್ಣು ಹುಟ್ಟಿದ ಮನಿ ಹೆಗ್ಗಣ್ಹತ್ತಿದಾಂಗ ।
ಗಂಡಸಮಗ ಗಜಭೀಮ । ಹುಟ್ಟಿದರ ।
ಚಿಲಕಿ ಚಿತ್ತರ ನಗತಾವ ॥

ಹೆಣ್ಣು ಹುಟ್ಯಾದಂತ ಹೇಳಿ ಖಳುವಲಿ ಬ್ಯಾಡ ।
ಹೆಣ್ಣಂದರವರು ಹೆದರ್ಯಾರ । ಕಂದವ್ವ ।
ಹೆಣ್ಣಲ್ಲ ನಮಗ ರವಿಚಿನ್ನ ॥

ನನ್ನ ಹೊಟ್ಟೇಲೊಂದು ಚಿನ್ನ ಹುಟ್ಟಿತು ತಾಯಿ ।
ನಿನ್ನೂರಿಗೊಮ್ಮೆ ಕರೆದೊಯ್ಯೆ । ಹಡೆದವ್ವ ।
ರಾಮು ಸಾಲ್ಯಾಗ ಬರೆಹಾಕ ॥

ಕಂದನ ಕಿರಿಕಿರಿ ಇಂದೇನು ಹೇಳಲಿ ।
ಬಿಂದಿಗಿ ಹಾಲು ಸುರುವಂದ । ಭೆಂಜೀಯು ।
ಚಂದ್ರಮನ ತಂದು ನಿಲಿಸೆಂದಾ ॥

ಕೂಸೆಲ್ಲ ಕುಂದಣ ನೆತ್ತೆಲ್ಲ ಜಾವೂಳ ।
ಕಟ್ಟಿ ಕೆಳಗಾಡಿ ಬೆವತಾನ । ನನ ಬಾಳ ।
ಹೊಸ ಮುತ್ತಿನ ದೃಷ್ಟಿ ತಗದೇನ ॥

ಕೂಸು ನೀ ಅಳಬ್ಯಾಡ ಕುಸುಮಲ್ಲಿಗಳಬ್ಯಾಡ ।
ರಾಸಿ ಬಂಗಾರ ಅಳಬ್ಯಾಡ । ನನ ಬಾಳ ।
ಬಂಗಾರ ಬಾರ ಬಗಲಾಗ ॥

ಕಸ್ತೂರ್ಕಿಂತಾ ಬಾಲ ಕಸದಾಗ ಆಡಿದರ ।
ಕಸವೀಸಿ ನನ್ನ ಮನದಾಗ । ಕಂದನ ।
ಇಸವಾಸ ಗೆಳದಿ ಕರೆದೊಯ್ಯೆ ॥

ಮಕ್ಕಳ ಹಡಿಬೇಕ ಮತ್ತೊಂದು ಮಾಣೇಕ ।
ಎತ್ತಿಕೋರಿ ಭಾವ ಬಗಲಾಗ । ನನ ಕಂದ ।
ಅತ್ತರ ಮುತ್ತು ಉದುರ್ಯಾವ ॥

ಸಾರಿಸಿದ ಮನಿಯಾಗ ನೀರ್ಯಾರು ಚೆಲ್ಯಾರ ।
ಪಾರಿವಾಳಾಡಿ ಗಿಣಿಯಾಡಿ । ಹಡೆದೌವ್ನ ।
ಮೊಮ್ಮಕ್ಕಳಾಡಿ ಮನಗ್ಯಾರ ॥

ಆಕಳ ಕಾಲೀಗಿ ಸೂತರ ದಳಿ ಹಾಕಿ ।
ತಮ್ಮೌವ್ನ ಮಲಿಯಂ ನಲಿನಲಿದು । ಕುಡಿವಾಗ ।
ನನ ಬಾಳ ನಿನ್ಹಂಬ್ಲ ನನಗಾಗಿ ॥

ಸಂಜಿಯಾಯಿತ ನಮ್ಮ ಸೌಭಾಗ್ಯದ ಸಂಜಿ ।
ದನ ಬಂದು ಮನಿಗಿ ಕರ ಬಂದು । ನನ ಬಾಳಾ ।
ತಾ ಬಂದ ಸಿರಿಯ ತುಳಕೂತ ॥

ಏಳು ಸುತ್ತಿನ ಕ್ವಾಟಿ ಎಳಿಯ ಬೆಳದಿಂಗಳ ।
ಏರಿ ಬಂದಾಳ ನಿನಗಾಗಿ । ನನ ಬಾಳ ।
ಲಾವಂಗದ ರಸ ಹೊರಹೊಂಡ ॥

ಓಣ್ಯಾಗ ಅವಚಾರಿ ಮನಿಯಾಗ ರಿಷಿಗೇಡಿ ।
ಆಡಹ್ವಾದಲ್ಲಿ ಕಿಡಿಗೇಡಿ । ಬಾಳನ ।
ಹ್ಯಾಂಗ ಸಂಬಸಲೆ ಹಡೆದವ್ವ ॥

ಭೆಯ್ಯಪ್ಪ ಛಲಗಂಗಿ ಆಡಿ ಬಾ ಗುಣವಂತಿ ।
ಮೆಯ್ದು ಬಾ ಕಬ್ಬು ಕವಳೀಯ । ಬಾಳಾನ
ಹೋರಿ ಮೇಯ್ದಾವ ಹೊಡಿಹುಲ್ಲ ॥

ನನ್ನ ಅಂಗಳದಾಗ ಮಲ್ಲೀಗಿ ಗಿಡ ಹುಟ್ಟಿ ।
ಝಲ್ಲೀಸ ಬ್ಯಾಡೊ ಗಿಣಿರಾಮಾ । ನಿಮ್ಮಂಥ ।
ಬಾಲರ್ಹೋಗ್ಯಾರ ಝುಳಕಕ ॥

ಬಣ್ಣದ ತೊಟ್ಟಿಲಕ ಜಿಗ್ಗಿ ಬಿದ್ದಾವು ಗೊಂಡೆ ।
ಇಬ್ಬರು ತೂಗಿದರ ಮಲಗನ । ಕಂದನ ।
ಅಬ್ಬರಣಿ ಭಾಳ ಮನಿಯಾಗ ॥

ಕಂದಯ್ಯ ಅಳದೀರೊ ಕವಳಿಯ ಹಂಣೇಗಿ ।
ತುಂಬುಚ್ಚಿ ಬೀಳ್ವ ಮುಗಿಮಾವ । ನೀ ಬೇಡಿ ।
ಅಳದಿರೊ ರಾಮ ಲಕ್ಷ್ಮಣ ॥

ಹಸರಂಗಿ ತೊಡಿಸೀದ ಹಾಲ್ಗಡಗ ಇಡಸೀದ ।
ಹಳ್ಳಕ ನೀನು ಬರಬ್ಯಾಡ । ನನ ಕಂದ ।
ಬೆಳ್ಳಕ್ಕಿ ಹಿಂಡು ಬೆದರ್ಯಾವ ॥

ಕುಂತಾಡು ಮಗಳೀಗಿ ಕೂದಲ ಬಿಟ್ಟೇನ ।
ನಗರದ ಚೌರಿ ತರಸೇನ । ಮನಿಯಾನ ।
ತಮ್ಮಗ ಧಾರಿ ಎರೆದೇನ ॥

ಕಂದನ ಕಿರಿಕಿರಿ ಇಂದೇನು ಹೇಳಲಿ ।
ಸಂಬಸಲಾರೆ ಹರದೀಯು । ಕಾಲಾನ ।
ಹೊಂದೀಸಲಾರೆ ಹುಲಿಗೆಜ್ಜಿ ॥

ಅತ್ತರ ಕಂದನ ಮುತ್ತ್ಯಾಕ ಉದುರ್ಯಾವ ।
ಎತ್ತಿಕೋರಿ ಭಾವ ಬಗಲಾಗ । ಕಂದನ ಬಳಗ ।
ಎತ್ತ್ಯಾಡಿ ಮುದ್ದು ಕೊಡತಾರ ॥

ಅತ್ತ ಕಂದವ್ವನ ಎತ್ತಿ ಹೊರಿಯಾಕ ತಂದ ।
ಚಂದಪ್ನ ನೋಡೊ ನನ ಕಂದಾ । ಒಳಗಿರುವ ।
ಗಂಡೆರಳಿ ನೋಡೊ ಗಜಭೀಮ ॥

ಹಲಿಗಿ ತೊಟ್ಟಿಲದಾಗ ಹವಳದ್ಹಾಸಿಗಿ ಹಾಸಿ ।
ಗುಲಗಂಜಿ ಚೆಂಡು ನಡುವಿಟ್ಟ । ನನ ಬಾಳ ।
ಮನಬಲ್ಲಂಗಾಡೊ ನವಿಲಾಟ ॥

ಕಂದವ್ವ ಅತ್ತರ ತಂದೀದ ಹೊರಿಯಾಕ ।
ಚಂದರನ ನೋಡೊ ನನ ಬಾಲಾ । ತವರೀನ ।
ಅಂದಾಲ ನೋಡೊ ಅರಗಿಳಿಯೆ ॥

ಹುಟ್ಟೀದ ಕಂದನಿಗೆ ಅಕ್ಷಯ್ಯವಾಗಲಿ ।
ಕೊಟ್ಟಂಥ ಸ್ವಾಮಿ ಮರೆವನೆ । ಕಂದಮ್ಮ ।
ಬೊಟ್ಟು ಬೆಟ್ಟಾಗಿ ಬೆಳೆಯಲಿ ॥

ನನ್ನ ಕಂದಾ ಮುದ್ದು ಹೊನ್ನ ತಾವರಿ ಮುದ್ದು ।
ಹಣ್ಣುಳ್ಳ ಗಿಡಕ ಗಿಣಿ ಮುದ್ದು । ಕಂದವ್ವ ।
ನೀ ಮುದ್ದು ನನ್ನ ಬಳಗಾಕ ॥

ತೂಗು ತೊಟ್ಟಿಲಿಗೊಂದು ಪಾಗು ಪಟ್ಟಿಯ ಹಾಸಿ ।
ಮಾಗಾಯಿ ಮಗನ ಮಲಗೀಸಿ । ಅವರಮ್ಮ ।
ಜೋಗುಳ ಹಾಡಿ ಹಿಗ್ಗ್ಯಾಳ ॥

ಮುರುಕು ತೊಟ್ಟಿಲಿಗೊಂದು ಹರಕು ಚಾಪಿಯ ಹಾಸಿ ।
ಅರಚು ಪಾಪನ ಮಲಗೀಸಿ । ಅವರಕ್ಕ ।
ಕಲಕೀತ ಹಾಡಿ ಹಿಗ್ಗ್ಯಾಳ ॥

ಪುಟ್ಟುಡುಗ ಪುಟ್ಟುಡುಗ ಯಾತರ ಪುಟ್ಟುಡುಗ ।
ಮಾಗಾಯಿಯಿಲ್ಲ ಮುರುವಿಲ್ಲ । ಪುಟ್ಟುಡುಗ್ಗ ।
ಮಾಡಿಸೋರುಂಟು ಹಣವಿಲ್ಲ ॥

ಕಂಡದ್ದು ಕನಸಾಗಿ ಉಂಡದ್ದು ಸವಿಯಾಗಿ ।
ಕಂದ ನೀ ಕಾಡಬೇಡೆಂದು । ಬೇಡುವೆ ।
ಕಂದಯ್ಯ ಮಾಡೊ ನಿದ್ದೀಯ ॥

ಕಾಂದೆಲ್ಲಿ ಆಡ್ಯಾನ ಕಡಗೆಲ್ಲಿ ಥೆಲ್ಯಾವ ।
ದುಂಡಮುತ್ತೆಲ್ಲಿ ಉದುರ್ಯಾವ । ಕಂದನ ।
ಬಿಂದೂಲಿ ಕಾಡವರು ಕೊಡರೆವ್ವ ॥

ಕ್ರೂವಲ್ಲೆಯೆಂದರೆ ಕರುಗಳು ಮೇಯುವು ।
ಕರುಗಳ ಬಿಟ್ಟು ಕರಿಯೀರೆ । ಕಂದನಿಗೆ ।
ಎರಿಯೀರೆ ನೊರೆಹಾಲ ಸಕ್ಕರಿ ॥

ರಂಗಯ್ಯನೋಟವೆ ತೆಂಗೀನ ತೋಟವೆ ।
ಅಂಗಳದಲಿರುವ ಸಮುದ್ರದ । ಆಚೇಲಿ ।
ರಂಗ ಪಾಂಡವರಿಗರಮನೆ ॥

ಬಾಲಯ್ಯನೋಟವೆ ಬಾಳಿಯ ತೋಟವೆ ।
ಕೂಗಿ ಬಂದ್ಹರಿದ ಸಮುದರ । ಆಚೇಲಿ ।
ಬಾಲ ಪಾಂಡವರಿಗರಮನೆ ॥

ತೊಟ್ಟಿಲೊಳಗಿನ ಕಂದ ತೋಳು ಬೀಸುವ ಚಂದ ।
ರಟ್ಟೆ ನೊಂದಾವು ಎಲೆ ಕಂದಾ । ಸಿಮ್ಮವ್ವ ।
ದೃಷ್ಟಿ ಮುರಿಲಾಕ ಅರಿಯಳು ॥

ಲಾಲೀಯ ಹಾಡಿದರ ಲಾಲೀಸಿ ಕೇಳ್ಯಾನ ।
ತಾಯಿ ಹಂಬಲ ಮರೆತಾನ । ಕಂದಯ್ಯ ।
ತೋಳ ಬೇಡ್ಯಾನ ತಲೆಗಿಂಬ ॥

ಆಕಾಡಿ ಮಳಿಯಾಗಿ ಗೋಕಾವಿ ಕೆರಿ ತುಂಬಿ ।
ಆನಿ ಈಸ್ಯಾವ ಅದರಾಗ । ಅಣ್ಣಯ್ಯ ।
ಕೂಸಂ ಕಂದನ ಕರೆದೊಯ್ಯೊ ॥

ಕಂದವ್ವ ಕಾಡಿದರ ರಿಂದವ್ವ ಮನಿಗೆಲಸ ।
ರಂಗರಂಗದ ಹಲಗೀಯ । ತೊಟ್ಲಾಗ ।
ಕಂದವ್ವ ಕಾಡಿ ಮಲಗ್ಯಾಳ ॥

ಅರಳೆಲೆ ಬೇಕವ್ವ ಬೆರಳಿಗುಂಗುರ ಬೇಕ ।
ಕೊರಳೀಗಿ ಬೇಕ ಅಪಲೀಯು । ಕಂದನ
ಕಾಲೀಗಿ ಬೇಕ ಕಿರಿಗೆಜ್ಜೆ ॥

ಆವೂರ ಈವೂರ ಜೋಗಿ ಜಂಗಮನೂರೆ ।
ನೀರಿಲ್ಲದೂರು ನರಗುಂದ । ಕಂದಗ ।
ಹಾಲೀಲೆ ಮಾರಿ ತೊಳದೇನ ॥

ಅಳು ಬಂದು ಅತ್ತರಿಯ ಹಸ್ತು ಬಂದುಂಡರಿಯ ।
ಎತ್ತಿಕೊಳ್ಳೆಂಬ ಹಟವರಿಯ । ನನ ಕಂದ ।
ಅಳದಾತ ಅತ್ತ ಬಗೆಯೇನ ॥

ತೂಗು ತೊಟ್ಟಿಲ ಕಂಡು ಹಾಲು ಬೇಡಲಿ ಬಂದ ।
ಬಾಲ ನಿನ ಭಾಷೆ ತಿಳಿಯುವ । ಕಂದಯ್ಯ ।
ಹಾಲು ಕುಡಿವೂದು ದುಸ್ತರ ॥

ತವರೂರಿಗೋದಾಗ ನವಿಲಬಣ್ಣದ ಪಕ್ಷಿ ।
ತಲಿಬ್ಯಾನಿಯೆದ್ದು ಅಳುತಿತ್ತ । ಕಂದನ ।
ಛಲುವೀಕಿ ನೋಡಿ ನಗತಿತ್ತ ॥

ನಡೆದು ಬಾ ಕಂದಯ್ಯ ನಡಗೀಯ ನೋಡೇನ ।
ಪದುಮದ ಪಾದ ಬಲಗಾಲ । ಕಂದಯ್ಯಗ ।
ಕಿರಿಗೆಜ್ಜೆ ಇಡಿಸಿ ನೋಡೇನ ॥

ಕಂದಯ್ಯ ಅತ್ತರ ಕಣಗೀಲ ಕಾತಾವ ।
ಒಣಗಿದ್ದ ಬಾಳಿ ಚಿಗತಾವ । ಬಾಲನ ।
ಬರಡಾಕಳೆಲ್ಲ ಹೈನಾಗೆ ॥

ಮುತ್ತೀನ ಮೂಗುತಿ ಮೂರೆಸಳ ಖ್ಯಾದೀಗಿ ।
ಮುಚ್ಚಿಕೊಂಡಾಗ ಹೆರಳಾಗ । ಕಂದಮನ ।
ಎತ್ತಿಕೊಂಡವರಿಗನುಮಾನ ॥

ಬಾಳೆಹಣ್ಣಿನ ಮಾಟ ಬಾದಾಮಿ ಎಲಿದೋಟ ।
ಬಾಗಿಲಾಗಾಡು ಮಗನಾಟ । ಕಲಕೇರಿ ।
ತೇರಿನ ಮಾಟ ಬಲು ಮಾಟ ॥

ಆಸರಕಿ ಬ್ಯಾಸರಕಿ ಯಾರಿಂದ ಕಳಿಯುಲೆ ।
ಕೂಸ ಶರಣಯ್ಯ ತೊಡಿಮ್ಯಾಲ । ಆಡಿದರ ।
ಬಂದ ಬ್ಯಾಸರಕಿ ಬಯಲಾಗಿ ॥

ಅಳಬ್ಯಾಡ ಅಂದರ ಹಟಮಾಡಿ ಅಳತಾನ ।
ಹವಳsದ ಜೊಲ್ಲ ಸುರಿಸ್ಯಾನ । ಕಂದಯ್ಯಗ ।
ತಾಯಿsಯ ಮಾತ ತಿಳಿಯsವ ॥

ಚಿಮ್ಯವ್ವ ಚಿಂಚುಣಿ ಆಡಿ ಬಾ ಹೊಲದಾಗ ।
ಮೇಯುದ್ದ ಬಾ ಕಬ್ಬ ಕವಳೀಯ । ನನ ಬಾಲ ।
ಓದಿ ಬಾ ಚಿನ್ನ ಗಿಣಿಯಾಗಿ ॥

ಯಾಕ ಅಳತೀ ನನ್ನ ಕುಂದsಣದರಗಿsಳಿ ।
ನಾ ಕೊಂಡುಕೊಡುವೆ ನಿನಗೊಂದು । ಬಿಜ್ಜರಿಗಿ ।
ನಾಕಬಾಜಾರದ ನೆಲಗಬ್ಬ ॥

ಬಿಕಿಬಿಕ್ಕಿ ಅಳತಾನ ಕೈಮಾಡಿ ಬೇಡತಾನ ।
ದುಕ್ಕ ಭಾಳವ್ವ ಬಾಲಗ । ನನ ತಾಯಿ ।
ಸಕ್ಕರಿಲ್ಲದ ಹಾಲ ಕುಡಿವೊಲ್ಲ ॥

ಅತ್ತ್ಯಾನ ಕಾಡ್ಯಾನ ಪಂತ್ತೇನ ಬೇಡ್ಯಾನ ।
ಚಿತ್ರದ ಗೊಂಬಿ ನೋಡ್ಯಾನ । ಕಂದಯ್ಯ ।
ಗಪ್ಪುಚಿಪ್ಪಾಗಿ ಮಲಗ್ಯಾನ ॥

ನಡೆದಾಡುಽ ಕಂದನ ನಡಗೀಯ ನೋಡೀನ ।
ಸಡಗರದಿಂದ ತೊಡಸೀನ । ಕಂದಯ್ಯಗ ।
ಅಯಿ ಮಾಡಿಸಿಕೊಟ್ಟ ಕಿರುಗೆಜ್ಜಿ ॥

ಮಂದಿ ಮಕ್ಕಳೊಳಗ ಚಂದ ನನ್ನ ಕಂದಯ್ಯ ।
ಸಂದಿಗೊಂದಿ ತಿರುಗಿ ಆಡ್ಯಾನ । ಕಂದಯ್ಯಗ ।
ಕಂಡವರು ಕೈಮಾಡಿ ಕರೆದಾರ ॥

ರೊಟ್ಟಿ ಕಿಚ್ಚಿನ ಮ್ಯಾಲ ಇಟ್ಟೇನಿ ಅನ್ನಕ ।
ಹೊಟ್ಟಿ ಹಸಿದಾವ ಕಂದಗ । ಮಾಸ್ತರಣ್ಣ ।
ಬಾಲ ಸಣ್ಣಾವ ಬಡಿಬ್ಯಾಡ ॥

ಓದು ಸಾಲಿಯಿಂದ ಓಡಿ ಬರುವುದು ಕಂಡೆ ।
ಕಾಲಾಗ ರುಳಿಯು ಕೈಮಾಟ । ಕಂದವ್ವ ।
ಮಾಲೀಕ ಗೌಡ್ರ ಮಗಳೇನ ॥

ಸಂಣಾಂಗಿ ತೊಡದಿರೊ ಸರಪಳಿ ಹಾಕದಿರೊ ।
ಚಿನ್ನ ಗ ನೀ ಇಲ್ಲಿ ಬರದಿರೊ । ನಿನ ಕಂಡು ।
ಹೆಣ್ಣಲ್ದ ಅವ್ಮ ಮರುಗ್ಯಾಳು ॥

## ಮಗ ಮಗಳು ಸೊಸೆ

ಕಣ್ಣು ಮೂಗಿಲೆ ನನ್ನ ಹೆಣ್ಣು ಮಗಳು ಚಲುವಿ ।
ಬಣ್ಣಕ ನನ್ನ ಸೊಸಿ ಚಲುವಿ । ದಸರೇಕ ।
ಬನ್ನಿ ಮುಡಿವಾಗ ಮಗ ಚಲುವ ॥

ಸರಕಾರ ಎಂಬೂದು ದರಕಾರ ನನಗಿಲ್ಲ ।
ಸರಕಾರದಾಗ ಸರಿಪಾಲು । ತರುವಂಥ
ಸರದಾರ ಮಗನು ಮನಿಯಾಗ ॥

ಕೆಲಸ ಮಾಡಿದರ ಸರಸವಾಡಿದಂಗ ।
ಅಲಸಂದಿ ಕಾಳ ಸುಲಿದಂಗ । ಕಂದವ್ವನ ।
ಕೆಲಸ ನೋಡ್ಯತ್ತಿ ಖಳುವಳ ॥

ಬೆಳ್ಳನ ಬಿಳಿಯೆತ್ತ ಬೆಳ್ಳಿಯ ಬಾರಕೋಲ ।
ಹಳ್ಳದ ಹೊಲವ ಹರಗ್ಯಾನ । ಬಾಲಾನ ।
ತೆಳ್ಳನ ಹೊಟ್ಟಿ ಹಸದಾವ ॥

ನಡೆದರೆ ನಡು ಸಣ್ಣ ಪದುಮಜಾತೀ ಹೆಣ್ಣ ।
ಮಾವೀನ ಹೋಳು ನನ ಕಣ್ಣು । ಕಂದಮ್ಮ ।
ಮಾವ ಬಂದಾನ ಒಳಗ್ಹೋಗ ॥

ಕಟ್ಬಾಣಿ ಕಟ್ಯಾಳ ಕಟ್ಟಿ ಮ್ಯಾಲ ನಿಂತಾಳ ।
ಬಟ್ಟಲಗಣ್ಣು ತಿರುವ್ಯಾಳ । ಕಂದಮ್ಮ ॥
ದಿಟ್ಟಿ ಸೋಂಕ್ಯಾವು ಒಳಗ್ಹೋಗ ॥

ಅರಿಸಣ್ಹಚ್ಚಿದ ಮಾರಿ ಸರಪಳ್ಹಚ್ಚಿದ ವಾಲಿ ।
ಅಗಸ್ಯಾಗ ನನಗ ಇಮುರಾದೆ । ಕಂದಮ್ಮ ।
ಅರಸ ಬಂದಾನ ಒಳಗ್ಹೋಗ ॥

ಇಂದು ನನ ಕಂದಮ್ಮನ ಗಂಡ ಕರಿಯಲಿ ಬಂದಾ ।
ಗೊಂಡೇದ ಸೆರಗ ಒಲಿಯೂತ । ಕಂದಮ್ಮ ।
ಪಂಡಿತನ ಕೂಡಿ ಹೊರಹೊಂಡ ॥

ಮಲ್ಲಿಗಿಯಂಥಾ ಮಗಳೀಗಿ ಎಲ್ಲಿತ್ತೊ ಒಗೆತನ ।
ಹುಲ್ಲಾಗ ಬೆಂಕಿ ಒಗೆದ್ಹಂಗ । ಗುಡ್ಡದ ।
ಕಲ್ಲೀಗಿ ಧಾರಿ ಎರೆದಂಗ ॥

ಹಾಲ ಬಾನ ಉಣಿಸಿ ಮಾರಿ ಸೆರಗಿಲಿ ಒರಸಿ ।
ಯಾರೀಗಿ ಆದಿ ನನ ಬಾಳ । ಬಂದಂಥ ।
ನಾರಿಗಾದೆಲ್ಲೊ ಹಡೆದಪ್ಪ ॥

ಅಂಗಿ ತೊಡುವ ಬಾಳಾ ಎಂದಿಗಾದಾನೆಂದ ।
ಕಂಡ ದೇವರಿಗಿ ಕೈಮುಗಿದ । ನನ ಬಾಳಾ ।
ಎಂದಿಗಾದಾನು ಪರಬುದ್ಧ ॥

ಜಿನದತ್ತ ಜಿನಸ್ವಾಮಿ ಹೊನ್ನ ಪಾರ್ಶ್ವನಾಥ ।
ನಿನ್ನಂಥ ಒಬ್ಬ ಮಗಬೇಕ । ಬಸ್ತ್ಯಾನ ।
ಪದ್ಮಾವತಿಯಂಥ ಸೊಸಿ ಬೇಕ ॥

ಗಂಡನ ಮಾತೇನ ಗಾದೀಗಿ ಮಂಚೀನ ।
ನೆಂಬ್ಯಾಳ ನಾರಿ ಒಗೆತನಕ । ನನ ಮಗಳು ।
ರಂಬೀನ ತರುವುದರಿಯಳು ॥

ಮೋಜೀನ ಮಳಿ ಬಂದು ಓಣೆಲ್ಲ ಕೆಸರಾಗಿ ।
ಜಾರಿ ಬಿದ್ದೆಲ್ಲ ನನ ಮಗಳ । ಕಂದವನ ।
ಖ್ಯಾದೀಗಿ ತುರುಬ ಕೆಸರಾಗಿ ॥

ವಜ್ಜರ್ದಚ್ಚಿದ ವಾಲಿ ಗೆಜ್ಜಿ ಹಚ್ಚಿದ ಪಿಲ್ಲೆ ।
ಹೆಜ್ಜಿಜ್ಜಿಗಿ ನಿನ್ನ ನಗಸೂವ । ರಾಯರಿಗೆ ।
ಬಿಟ್ಟು ಬಂದ್ಯಾಕ ನನ ಬಾಲಿ ॥

ಚೆಲುವ ಚೆಂಡಿಕಿ ಬಿಟ್ಟು ಗರುಡಗಂಧವ ಹಚ್ಚಿ ।
ಎಳೆಯ ಬಿಸಲಾಗ ಹುಡದೀಯ । ಹಾಕೂವ ।
ಕಂದ ನಿನ ಗಂಧ ಬೆವತಾವ ॥

ಕಾಮಕಸ್ತೂರಿ ಹೂವ ಭೂಮಿ ತಿರುಗಿದರಿಲ್ಲ ।
ಕೋಮಲ್ಲಿ ಚೆಲುವಿ ನನ ಮಗಳ । ನಿನ ನೋಡಿ ।
ಭೂಮಿತೂಕದ ವರ ಬಂದಾ ॥

ವಾರೀಗಿ ಪುರುಷರ ತೋಳ ಮೇಲಿನ ನಿದ್ದಿ ।
ಏಳ ನನ ಮಗಳ ಬೆಳಗಾಗಿ । ದೊಡ್ಯಾನ ।
ಕೀಲ ಕರಗೋಳು ಮೊಲೆಯುಂಡು ॥

ಸಾಕುಸಾಕಂದರ ಯಾಕ ಸೇರಿಗಿ ಹೋದಿ ।
ನಾಕಂ ತೊಂಡಲದ ಮಳಿ ಬಡಿದು । ಮಾವೀನ ।
ಖಿಗ್ಗಾಯಿ ಬಡೆದು ಕೊಡವೊಡೆದು ॥

ಮಗಳ ನಿನ್ನ ಖಿಳುವಿ ಮಾಳೀಗಿ ಏರೇನ ।
ಮಾವೀನ ಘೊಲ್ಲಿ ಮರಿಯಾಗಿ । ಕಂದವ್ವ ।
ಮಾಣೀಕ ನಮಗ ಎರವಾಗಿ ॥

ಹೋಗಂದರ ಹೋಗಳು ಹೊಸ್ತಿಲ ದಾಟಳು ।
ಮಾರಿ ನೋಡಿ ನೋಡಿ ಅಳತಾಳ । ಕಂದಮ್ಮ ।
ಹ್ಯಾಂಗತ್ತಿ ಮನಿಗಿ ಖಳುವಾಲೆ ॥

ಕರವತಕಾಟಿ ಪತ್ಲ ಉಗುರ್ಹಚ್ಚಿ ನಿಲಿಗ್ಹೊಯ್ದು ।
ಕರ್ನಾಟಗೊಂಬಿ ಕೈಬೀಸ । ಕಂದವ್ವ ।
ಹರದಾರಿ ಹಾದಿ ಖಳಂವೇನ ॥

ಕಾಮನ ತೋಟಕ ಭೀಮನ ಕಾವಲ ।
ಜೇನತುಪ್ಪದಲೆ ಮಡಿಯೆಳೆದು । ನನ ಬಾಲ ।
ಕಾಮು ಬೆಳೆದಾನ ಕರಿಕಬ್ಬ ॥

ಹುಡುದೀಯ ಹಿಡಿವಲ್ಲಿ ಹುಗುಬಿದ್ದು ನೋಡೇನ ।
ಯಾರು ಬಾಳಾಗ ಸರಿಯಿಲ್ಲ । ಹೋಳೀಯ ।
ಕಾಮನ್ಹೋಲೀಕಿ ಕಂದಗ ॥

ಒಲ್ಲದ ಒಗೆತನ ಎಲ್ಲಿತ್ತೊ ಮಗಳೀಗಿ ।
ಬೆಲ್ಲಕ ಬೇವು ಕಲತಂಗ । ಅಡವ್ಯಾನ ।
ಕಲ್ಲೀಗಿ ಧಾರಿ ಎರೆದಂಗ ॥

ಹಲ್ಲಿಗಿ ಹಲಪೂಡಿ ಗಲ್ಲಕ ಅರಿಷಿಣ ।
ಗೊಲ್ಲರೋಣ್ಯಾಗ ಬರುವಳು । ಕಂದವ್ವ ।
ನಲ್ಲ್ಯಾರ ಒಳಗ ಕರ ಚಲುವಿ ॥

ಅತ್ತಿಮನಿಯ ಊಟ ಮಟಮಟ ಮದ್ಯಾಣ ।
ಚಿಕ್ಕ ಕಂದಮ್ಮ ಹಸದಾಳ । ನನ ಬಾಳಾ ।
ಸಕ್ಕರಿಯ ಒಯ್ಯೊ ಸೆರಗೀಲಿ ॥

ಕಾಮು ನನ ಕಂದಯ್ಯ ಕರಿ ಖಬ್ಬ ಹಚ್ಯಾನ ।
ಮಲ್ಲಾಡ ದೇಶ ಗಿಣಿ ಬಂದು । ಮೆಯ್ದಾವ ।
ಖಬ್ಬ ನಿನ ಸುಂಕ ವರದೀಯ ॥

ನನ್ನ ಅಣ್ಣನ ಮಗಳ ನನಗ ಹೋಲಲಿ ಬ್ಯಾಡ ।
ನನ್ನಲ್ಲಿ ಭಾರಿ ಗುಣವಿಲ್ಲ । ಹೇಮರಡ್ಡಿ ।
ಮಲ್ಲಮ್ಮಗ್ಹೋಲ ನನ ಸೊಸಿಯೆ ॥

ಚೆದುರ ಮುಡಿದ ಹೂವು ಚಾವಡಿ ಏರಲಿ ।
ಕುದುರಿ ರಾವೂತ ನನ ಬಾಳ । ಮುಡಿದ್ಹೂವು ।
ಉದರಲಿ ನನ್ನ ಉಡಿಯಾಗ ॥

ವಜ್ಜರದ ಗುಂಡೀಗಿ ವರಿ ಹಚ್ಚಿ ನೋಡಿದ ।
ಗುಂಜ್ಜಿ ನನ ಮಗಳ ಗುಣಗೋಳು । ಬಂದಾವ ।
ವಜ್ಜರದಕಿಂತ ವಜನವ ॥

ಕಲ್ಲಾಸೆ ಕಟ್ಟೀಗಿ ಮುಳ್ಳಾಸೆ ಬೇಲಿಗಿ ।
ಬಲ್ಲಿದರಾಸೆ ಬಡವರಿಗಿ । ನನ ಕಂದಾ ।
ನಿನ್ನಾಸೆ ನನಗೆ ಅನುಗಾಲ ॥

ಯಾವಾಗ ನೋಡಿದರ ಅವರಿಹೂವಿನ ಬಣ್ಣ ।
ಉಟ್ಟಿರುವ ಸೀರಿ ಜರತಾರ । ಕಂದವ್ನ ।
ಆಳೂವ ಅರಸ ಸುಭೆದಾರ ॥

ಮಗಳು ಎಂಥಾ ಛೆಲುವಿ ನಕ್ಕರೆ ತುಟಿಗೆಂಪು ।
ಅಳಿಯ ಎಂಥವರು ನನಗ್ಹೇಳ । ಹಂಪಿಯ ।
ವಿರುಪಾಕ್ಷಿಗಿಂತ ಚೆಲುವರು ॥

ಕೂಸು ನನ ಕಂದವ್ವ ಮಾಸೀದ ದಟ್ಟಿ ಕಳಿಯೆ ।
ದಾಸ್ಯಾಳದ್ಹೂವ ಮುಡಿ ಬಾರ । ನಿಮ್ಹಾವ ।
ಕಾಸಿ ನಿನ ಬೇಡ ಬರತಾರ ॥

ಆರೂತಿ ಅಡ್ಡಿಣಗಿ ಗೀರೂತಿ ಬಟ್ಟಲ ।
ಮಾರಾಯ ಅಣ್ಣನ ಶಿವಪೂಜಿ । ಮಾಡಟಿಗೆ ।
ಮೂಡಲ ಕೆಂಪು ತಿಳಿಹರಿದು ॥

ಮಗ ನಿನ್ನ ಹಡಿಲಾಕ ಮುಗಿಲ ಮುಟ್ಟಿತ ಜೀವ ।
ಮದನಾರಿ ನನ್ನ ಸೊಸಿ ಬಂದು । ನಡಿದಾಗ ।
ಮಗ ನಿನ್ನ ಮನವು ಎರಡಾಗಿ ॥

ನಡಗರ ಯಾರಿಂದ ಬಡಿವ್ಯಾರ ಯಾರಿಂದ ।
ಖಡಿ ಹೊಡೆದು ಆಡು ಮಗನಿಂದ । ಕಟ್ಟಿಕಲ್ಲ ।
ಜಡಿದೇರಿ ಬರುವ ಸೊಸಿಯಿಂದ ॥

ಕಾಮನಂಥಾ ಕಣ್ಣು ಭೀಮನಂಥಾ ಹುಬ್ಬು ।
ರಾವಣನಕಿಂತ ನಡು ಸಣ್ಣ । ನನ ಬಾಲ ।
ಹುಲಿಯೆ ನಿನಗ್ಯಾರು ಕೆಣಕ್ಯಾರ ॥

ಭಾಗಾದಿ ಮನಿಮುಂದ ಹ್ಯಾಂಗ್ಹಾಯ್ದೊ ನನ ಬಾಲಾ ।
ಚೌರಿ ಛತ್ತ್ರರಿಕಿ ನೆರಳೀಲಿ । ಬರುವಾಗ ।
ಭಾಗಾದಿ ಮಾರಿ ತೆಳಿಯಾಕ ॥

ಮಗಳು ಮಾತಿನ ಗಿಳಿಯು ಸೊಸಿಯು ಸೂತರ ಗೊಂಬಿ ।
ಮನಿಮಾಡು ತಮ್ಮ ಮತಿವಂತ- । ನ ಕೂಡ ।
ಮನ ಸೂರಿ ಮಾಡ ನನ ಮಗಳ ॥

ಗಂಗಿಯಷ್ಟು ಮಾಯೆ ಗೌರಿಗಿಲ್ಲೇಳು ಸಿವನೆ ।
ನಡುನೀರ ತಂಪು ಧಡಕಿಲ್ಲ । ಮರ್ತ್ಯದಾಗ ।
ಮಗಳಷ್ಟು ಮಾಯೆ ಸೊಸಿಗಿಲ್ಲ ॥

ಸೋದರಮಾವನ ಸೊಸಿಯಾಗ ನನ ಮಗಳ ।
ಬಿಸಲಾಗ ನೀರ ತರಗೊಡನ । ನಿಮ್ಮಾವಾ ।
ನೀರ್ಹೊಳಿಗೆ ನಿಂಬಿಬನ ನಿಲುವಿ ॥

ಮಗಳ ಮಾವಾ ಬಂದಾ ಸೊಸಿಯ ಅಪ್ಪ ಬಂದಾ ।
ಯಾರಿಟ್ಟು ಯಾರ ಖಳುವಲಿ । ನನ್ನಣ್ಣಾ ।
ಮಗಳಿಟ್ಟು ಸೊಸಿಯ ಕರೆದೊಯ್ಯೊ ॥

ಚೆಲುವ ಚೆನ್ನಿಗ ಬಾರೊ ಹವಳ ಮಾಣಿಕ ಬಾರೊ ।
ಹರದಿ ಬಲ್ಲಿರುವ ಹರಲೀಗ । ಬಾರದೆ ।
ನಮ್ಮ ಮನಕಿಂದು ಸೊಗಸಿಲ್ಲ ॥

ಮಾವ ಮಾಡಿದ ಸೆಲ್ಲೆ ಮಾರಿಮ್ಯಾಲ್ಹಾಕೊಂಡು ।
ಮಾಲದಾಗ್ಯಾಕ ಮಲಗೀದ್ಯೋ । ನನ ಬಾಲಾ ।
ಮಾದೇವನಳಿಯ ಉಣ್ಣೇಳೊ ॥

ಮರಸುಳ್ಳ ಒಗೆತನ ಒಳಗೆ ಸೇದೀ ಭಾವಿ ।
ಹಲಿಗಿ ತೊಟ್ಟಿಲದ ಹಸಗೂಸ । ನನ ಮಗಳು ।
ಗರತಿ ಮಾಡ್ಯಾಳ ಮನಿಗೆಲಸ ॥

ದೊಡ್ಡವರ ಮಗಳೀಗೀ ಅಡ್ಡ ಲಿಂಗಾಕಾರ ।
ಖಡ್ಡಿ ವಿಭೂತಿ ಕರಿಹಲ್ಲ । ಕಂದವನ ।
ಒಡಿವಿ ಇಡಸಟಿಗೆ ಬೆಳಗಾಗಿ ॥

ಸಿಟ್ಟಿನ ಹರದೀಗಿ ಶ್ರೀಕೃಷ್ಣ ದೊರೆದಾನ ।
ಸುತ್ತೇಳು ಬಳಗ ಮರಸ್ಯಾನ । ಕಂದೌವ್ವ ।
ಹರಿಚಂದರಾಯ ದೊರೆದಾನ ॥

ಮುಂಜಾನೆ ಎದ್ದರ ಮುಂದೆ ಹಂದರ ಚೆಂದ ।
ಮುನ್ನೋಡಿ ಹರಿವ ನದಿ ಚೆಂದ । ಕಂದನ ।
ಸಂದ್ಯಾನ ಮಾಡ್ವ ಕೈ ಚೆಂದ ॥

ಹೆಣ್ಣೀನ ಹರೆಯು ಹಣ್ಣೀನ ಗೊಂಚಲು ।
ಕಣ್ಣೀಲಿ ನೋಡಿ ಮನಬಾರ । ಬಡವಂತ ।
ಕನ್ನಿರಿಲ್ಲೇನ ಮನಿಯಾಗ ॥

ಸೊಸಿಯು ಬರತಾಳಂತ ಖುಸಿ ಭಾಳ ಮನದಾಗ ।
ಸೊಸಿ ಬಂದು ಮಗನ ಕಸಗೊಂಡು । ಬಾಳ್ವಾಗ ।
ಮುಗಿಲೀಗಿ ಬಾಯ ತಗದಾಳ ॥

ಮಾವಯ್ಯ ನಿನ ಮಗಳ ಮಲ್ಲಾಡಕ ಕೊಡಬ್ಯಾಡ ।
ನೀರ ಹೊತ್ಹೊತ್ತ ತಲಿ ದಡ್ಡ । ಮಾವಯ್ಯ ।
ಭತ್ತ ಕುಟ್ಟಿ ಕುಟ್ಟಿ ಕೈ ದಡ್ಡ ॥

ಜೋಗುಳ ಕಾಯಿ ಮುದ್ದ ಬೆಳ್ಳೀ ತವರು ಮುದ್ದ ।
ಮಾವಿನ ಗಿಡಕ ಗಿಳಿಮುದ್ದ । ಸಂಗಣ್ಣ ।
ನೀ ಮುದ್ದ ನನ್ನ ಬಳಗಕ ॥

ಬಾಳೆ ಹಣ್ಣಿನ ಮಾಟ ಬಾದಾಮಿ ಎಲೆತೋಟ ।
ಬಾಗಿಲಾಗಾಡುವ ಮಗನಾಟ । ಕಲಕೇರಿ ।
ತೇರಿನ ಮಾಟ ಬಲು ಮಾಟ ॥

ಹೆಣ್ಮಕ್ಕಳ್ಹುಟ್ಟಿದರ ಹೆರವರಿಗೆ ಸೊಸೆಯಕ್ಕ ।
ಗಂಡು ಹುಟ್ಟಿದರ ಮನೆಗಾಗಿ । ಅಪ್ಪಯ್ಯ ।
ಎಲ್ಹೋದರೂ ನಿನ್ನ ಹೆಸರಾಗಿ ॥

ತಾಯ್ತನ್ನ ಮಕ್ಕಳ ಯಾವಾಗ ನೆನೆವಳು ।
ಉಂಬಾಗ ಮಡಿಯನುಡುವಾಗ । ಹಿತ್ತಲದ ।
ಹೂವ ಕಂಡಲ್ಲಿ ಮುಡಿಯುವಳ ॥

ಕಂದನ ಕರೆಯಮ್ಮ ಚಂದನದ ಗೊಂಬೆಯ ।
ಚಂದುಳ್ಳ ಅರಸಿ ಚೆಲುವೆಯ । ಕಂದನ ।
ಬಿಂದಿಗೇಲಿ ನೀರು ತರುವವಳ ॥

ಹೆಣ್ಣಿದ್ದ ಮನೆಗೆ ಕನ್ನಡಿ ಯಾತಕ್ಕ ।
ಹೆಣ್ಣು ಸಣ್ಣವಳು ಒಳಗಿರಲು । ನನ ಮಗಳು ।
ಕನ್ನಡಿಯಂಗ ಹೊಳೆಯುವಳು ॥

ಹಸಿವಾದ ಮಕ್ಕಳಿಗೆ ಹತ್ತಿರೆಲ್ಲು ಮನೆಯಿಲ್ಲ ।
ಹಸಿವ ಬಲ್ಲಮ್ಮ ಒಳಗಿಲ್ಲ । ತೊಟ್ಟಿಲದ ।
ಶಿಶುವ ಕಂಡ್ಹಸಿವು ಅಡಗೀತು ॥

ಹಾಲು ಕುಡಿಯಲು ಬಾರೊ ಬಾಲಕೃಷ್ಣನೆ ಬಾರೊ ।
ಗೋವಿಂದ ಬಾರೊ ಹರಿ ಬಾರೊ । ತೊಟ್ಟಿಲದ ।
ಕಂದಯ್ಯ ಹಾಲ ಕುಡಿ ಬಾರೊ ॥

ಬಡವೆಯ ಮಕ್ಕಳು ನಡೆದರೆ ಸಂತೋಷ ।
ಹುಡಿಯಾಡಿ ಮನೆಗೆ ಬರುವಾಗ । ತಾಯಿಗೆ ।
ಬಡತನದ ಜಾನ ಮರೆಯಿತು ॥

ಮಲ್ಲಿಗೆ ಹೂವೆ ಇಲ್ಯಾಕೆ ನಿಂತಿದ್ದೆ ।
ಎಲ್ಲಾರ ಕಣ್ಣು ನಿನ ಮೇಲೆ । ಕಂದಯ್ಯ ।
ವಲ್ಲಿ ಸೆರಗೆಲ್ಲ ಪರಿಮಳ ॥

ಹಸುಮೊಗುವೆ ಚಿನ್ನsವೆ ಏಸುನಿ ಹೊಂಬಣ್ಣsವೆ ।
ಬಸುರೇರ ಹಣೆಯ ತಿಲಕsವೆ । ನನ್ನಯ್ಯ ।
ಹೊಸ ಮುತ್ತ ಹೊನ್ನ ಕಲಶsವೆ ॥

ಬಾಳೆಹಣ್ಣಿನಂತೆ ಬಾಲಕನ ಮೈ ಚಂದ ।
ಏನುಂಡು ಈ ಮಗನ ನೀ ಹಡೆದೆ । ತವರ್ಮನೆಯ ।
ಹಾಲುಂಡು ಹಸಿರು ಬಳೆಯಿಟ್ಟು ॥

ಸೆರಗನ್ನು ಬಿಡು ನನ್ನ ಸೆರಗಿsನ ಕಂದಯ್ಯ ।
ನಿರಿ ಬಿಡು ನನ್ನ ರಘುರಾಮ । ರಾಯಪ್ಪ ।
ಕಡಲೆಯ ಕೊಡುವೆ ನಡೆ ಮುಂದೆ ॥

ಕೊಂಬಿಲ್ಲದಾನೆಗೆ ಕೊಂಬು ಬರುತವೆ ಎಂದು ।
ಸಂಭ್ರಮ ನನ್ನ ಮನೆಯಲ್ಲಿ । ಕಂದಯ್ಯಗೆ ।
ಕೊಂಬೊಡೆದು ಬಂತು ಕೊನೆಮೀಸೆ ॥

## ಹರಕೆ

ಅತ್ತೀಗಿ ಹಡಿಯಲಿ ಹತ್ತೆಮ್ಮಿ ಕರಿಯಲಿ ।
ಓತ್ತಲ ಬಾಳಿ ಚಿಗಿಯಲಿ । ಅತ್ಯಂದು ।
ಅತ್ತಿಗೆಯು ಮಂಗಳು ಕರಿಯಲಿ ॥

ಹಸುಗೂಸು ಹುಟ್ಟಲಿ ಹೊಸಪ್ಯಾಟಿ ಕಟ್ಟಲಿ ।
ರಸಬಾಳಿ ಕಬ್ಬು ಬೆಳೆಯಲಿ । ನಮ್ಮೂರ ।
ಬಸವನ ತೇರು ಎಳಿಯಲಿ ॥

ಸುರಪೂರ ಬೆಳೆಯಲಿ ಸುರಪೂರ ಬಿತ್ತಲಿ ।
ಸುರಪೂರ ಗುಡ್ಡ ಚಿಗಿಯಲಿ । ವನ್ನಂಥ ।
ಹೆಣ್ಣೀನ ನ್ಯಾಯ ಸಂರಿಯಲಿ ॥

ಭಾಗಾದಿ ಬಲಕಿರಲಿ ವೈರಿ ತಾ ಎಡಕಿರಲಿ ।
ಭಾಡಿ ನಿನ ಮನಿಯು ಇದರಿರಲಿ । ಬಲಭೀಮ ।
ದೇವ ನನ ಮ್ಯಾಲ ದಯವಿರಲಿ ॥

ಹಾಗಲ ಬಳ್ಳೀಗಿ ಹಂದರ ಹಾಕೀನ ।
ಗಿಂಡೀಲೆ ನೀರು ಸುರವೀನ । ನನತಮ್ಮ ।
ಚಂದ್ರಾಮ ನಿಮ ಬಳ್ಳಿ ಚಿಗಿಯಲಿ ॥

ಅತ್ತಿಗೆ ಬಸುರಾಗ್ಲಿ ಹತ್ತೆಮ್ಮೆ ಕರೆಯಲಿ ।
ಅತ್ತೆಮ್ಮ ಎಂದು ಕರೆಯಲಿ । ಅಣ್ಣಯ್ಯ ।
ಹೆಚ್ಚು ಸುಖಿಯಾಗಿ ನೀ ಬಾಳು ॥

## ಬಂಜೆ

ಬಾಲಕರಿಲ್ಲದ ಬಾಲಿದ್ಯಾತರ ಜನ್ಮ ।
ಬಾಡೀಗಿ ಎತ್ತು ದುಡಿದಂಗ । ಬಾಳೆಲೆಯು ।
ಹಾಸುಂಡು ಬೀಸಿ ಒಗೆದಂಗ ॥

ಕಂದನ ಕುಡು ಶಿವನೆ ಬಂಧನ ಬಡಲಾರೆ ।
ಹಂಗೀನ ಬಾನ ಉಣಲಾರೆ । ಮರ್ತ್ಯದಾಗ ।
ಬಂಜೆಂಬ ಶಬುದ ಹೊರಲಾರೆ ॥

ಬಂಜಿ ಬಾಗಿಲ ಮುಂದ ಬಂಗಾರದೊಳಕಲ್ಲ ।
ಬಂದು ಕುಟ್ಟಾಕ ಸೊಸಿಯಿಲ್ಲ । ಮಾನಾಮಿ ।
ಒನ್ನಿ ಮುಡಿಯಾಕ ಮಗನಿಲ್ಲ ॥

ಹೆಣ್ಣು ಆಗುದಕಿಂತ ಮಣ್ಣು ಆಗುದು ಲೇಸು ।
ಮಣ್ಣೀನ ಮ್ಯಾಲ ಮರವಾಗಿ । ಇದ್ದರ ।
ಬಂದವರಿಗೆಲ್ಲ ನೆರಳವ್ವ ॥

ಬಂಜಿ ಬಾಗಿಲ ಮುಂದ ಅಂಜೂರಿ ಗಿಡ ಹುಟ್ಟಿ ।
ಟೊಂಗಿಟೊಂಗೆಲ್ಲ ಗಿಣಿ ಕೂತು । ಹೇಳ್ಯಾವ ।
ಬಂಜಿ ನಿನ ಬದಕ ಹೆರವರಿಗೆ ॥

ವಿಠ್ಠಲನ ಗುಡಿಯಾಗ ಎಷ್ಟೊತ್ತು ನಿಂದರಲೆ ।
ಬಟ್ಟಕುಂಕುಮ ಬೆವತಾವ । ವಿಠ್ಠಲ ।
ಟೊಪ್ಪೀಗಿ ಮಗನ ದಯಮಾಡೊ ॥

ಮಕ್ಕಳನ ಬೇಡುವರು ಪಟ್ಟಣಕ ನಡೆರೆವ್ವ ।
ಪಟ್ಟಣದ ಕೆಳಗ ಅರಕೇರಿ । ಅಮ್ಮಗಸಿದ್ದ ।
ತೊಟ್ಟೀಲ ಕೊಟ್ಟು ಕಳುಹ್ಯಾನ ॥

ಬಾಲರಿಲ್ಲದ ಬಾಳ್ವಿ ಬಾಳೆಯಿಲ್ಲದ ತೋಟ ।
ಗಂಧ ಕಸ್ತೂರಿ ಪರಿಮಳ । ಒಳಗಿದ್ದು ।
ರಂಭೆ ನೀ ಬಾಳೆ ಫಲವಿಲ್ಲ ॥

## ವೈಧವ್ಯ

ಗಂಡ ಸತ್ತರಿನ್ನ ಗಂಧ ಕುಂಕುಮವ್ಯಾಕ ।
ಬಂಗಾರವ್ಯಾಕ ಬಳಿಯಾಕ । ಕೊರಳೀನ ।
ಸಿಂಗಾರ ಶಿವನೆ ಕಸಗೊಂಡ ॥

ಕಂದನೆತ್ತಲಿಲ್ಲ ಕೈಬೀಸಿ ನಡೆಲಿಲ್ಲ ।
ಗಂಡನ ಪುಣ್ಯ ಉಣಲಿಲ್ಲ । ಶಿವರಾಯ
ರಂಡೇತಕ್ಹೀಂಗ ಗುರಿಯಾಗಿ ॥

ಮುಗ್ಗ ಜ್ವಾಳಧಂಗ ಕಗ್ಗ ಬೆಳಸಿನ ಹಂಗ ।
ಹಗ್ಗಿಲ್ದ ಭಾವಿ ಕೊಡದ್ಹಾಂಗ । ಪತಿರಾಯ
ನೀ ಹೋದ ಛಣಕ ನನ ಜೀವ ॥

ಅಲ್ಲಿ ನೀ ಬಾರವ್ವ ಇಲ್ಲಿ ನೀ ಬಾರವ್ವ ।
ಎಲ್ಲೀಯುತನಕ ಈ ಸಲ್ಲ । ನಲ್ಲಾನ ।
ಇರುತನಕ ಮುಖ ನಮ್ಮ ಮುಂದ ॥

ಗಂಡಹೆಂಡಿರು ಎಂದು ಕಂಡಾಡಿದವರೆಲ್ಲ ।
ಕಂಡಾರ ಮಾರಿ ತಿರುವೂರ । ಗಂಡಿಲ್ದ ।
ನಾರೆವ್ವ ನಾರ ಕೊಳಿನೀರ ॥

ಹೆಣ್ಣೀನ ಜೀವಕ್ಕ ಕುತ್ತೆಷ್ಟ ಕೊರತೆಷ್ಟ ।
ಹೇಳಿದರ ಮುಳ್ಳ ಮೈಗೆಲ್ಲ । ಕೊರತೆವ್ವ ।
ಮಾರಾಯ್ನ ಬಿಸಲ ವರತೆಂಗ ॥

ಗಂಡ ಸತ್ತ ಮ್ಯಾಲ ರಂಡಿತನದ ಸಿರಿಯು ।
ಸುಡಬೇಕ ಏನಾದರೇನ । ಆ ಜೀವ ।
ಇದ್ದ್ಹಂಗ ಬಂಡಿ ಬಿಚ್ಚಿಟ್ಟ ॥

ಕೂಡಿ ಕುಂತ ನೆನೆವ ನೋಡಿ ನಕ್ಕ ಒನಪ ।
ಇದ್ದೆಲ್ಲೋ ಆತ ಈಗೆಲ್ಲಿ । ಮುಗಲಾನ ।
ಮರಿಯಾತ ಮೋಡದು ಬಣ್ಣದಂಗ ॥

ಗಂಡನಿಲ್ಲದ ಬಾಲಿ ದಂಡನಾಳಿದರೇನ ।
ಪುಂಡೀಯು ಹೂವು ಹೊಲತುಂಬ । ಅರಳಿದರ ।
ಚಂಡುಹೂವಿನ ಹೊಲವ ॥

ಕಾಜೀನ ಕರಿಮಣಿ ಮೋಜೀನ ಹಣಚಿ ಬಟ್ಟು ।
ರಾಜಮಂಡಲದ ಗುಳದಾಳಿ । ಇರುವನಕ ।
ರಾಜರ ಚಾಜ ನನ ಮನಿಗೆ ॥

ಹಾಕಿದ ಮಲ್ಲಿಗೆ ಹಾಕಿದ್ಹಾಂಗೆ ಇದ್ದಾವ ।
ಆಕಾಶಕ್ಹಬ್ಬಿ ಕುಡಿ ಒಡೆದು । ಹೂ ಬಿಟ್ಟು ।
ಬೇಕಾದ ದೊರೆಗೋಳು ಮುಡಿದಾರು ॥

## ಹಾಸ್ಯ

ವಾಲಿಕಾರ ನಿನಗ ಒಳ್ಳೆ ಹೆಂಡತಿ ಯಾಕೊ ।
ನೀ ಹೋದಿ ರಾಜ್ಯ ತಿರಗೂತ । ನಿನ ನಾರಿ ।
ಬಾಡ್ಯಾಳೊ ಬಾಳಿ ಸುಳಿಯಾಗಿ ॥

ತಿಂದೋಡಿ ನಿನ ಗಂಡ ತಿಂದೇನು ಮಾಡಂದ ।
ತಿಂದೇಳು ಮನಿಯ ತಿರಗಂದಾ । ಉಟಸೀರಿ ।
ಉಂಗಟಕ ಹಾಕಿ ಹರಿಯಂದ ॥

ವಂಗರುವಳ್ಳಿಯು ನಿಂಗೆಗೌಡರ ಮಗಳು ।
ತಂಗಳ್ಹಿಟ್ಟಿಕ್ಕಿ ಮೊಸರಿಕ್ಕಿ । ಆ ಬಾಲಿ ।
ಬೆಂದ್ಹುರ್ಳಿ ಕೊಟ್ಟು ಬೆದಕ್ಯಾಳಿ ॥

ಕುಂಬಾರನಿಗ್ಯಾಕೊ ಗೊಂಬೆಮಾಟದ ಹೆಣ್ಣ ॥
ತುಂಬೆಂದ ಮಣ್ಣ ತುಳಿಯೆಂದ । ಮನೆಮನೆಗೆ ।
ಹೊತ್ತು ಮಾರೆಂದ ಹೊಸ ಮಡಕೆ ॥

ತುಮಕೂರ ಹೆಣ್ಣಿಗೆ ತುದಿಗಾಲ ಪಾಪಾಸ ।
ಜವ್ವಾನ ಚವರಿ ನೆರಿಗೇಲಿ । ಇಟಗೊಂಡು ।
ತುಮಕೂರಿಗೋಲೆ ಬರೆವಾಳೆ ॥

ತುಮಕೂರಿಗೋಲೆ ಏನಂತ ಬರೆದಾಳೆ ।
ಮೀನು ನುಂಗಿತು ಮೊಸಳೆಯು । ಈ ಊರ ।
ರಾಣಿ ನುಂಗ್ಯಾಳೆ ಚದುರನಾ ॥

ಬೇಲೂರ ಹೆಣ್ಣೀ ಬೇಗನೆ ರಾಗೀ ಮಾಡೆ ।
ಕೂರೀಗೆ ನಿಂತಾವೆ ಹೊಲವಾಗ । ಎಲೆ ಹೆಣ್ಣ ।
ಜಾಣ ನಿಂತಾನ ಬಿಸಲಾಗೆ ॥

## ಪೌರಾಣಿಕ

ಜನಕರಾಯನ ಮಗಳು ಬನಕ ತೊಟ್ಟಿಲ ಕಟ್ಟಿ ।
ಲವಕುಶರನ್ನು ತೂಗ್ಯಾಳೊ । ಸೀತಾದೇವಿ ।
ನಗುತ ವನವಾಸ ಕಳದಾಳ ॥

ಸೀತಾನ ಒಯ್ವಾಗ ಶ್ರೀರಾಮ ಸಣ್ಣವ ।
ಆಗ ಹನುಮಂತ ಹಸುಗೂಸ । ಇದ್ದರು ।
ಸೀತಾನ ಸೆರೆಯು ಬಿಡಿಸ್ಯಾನ ॥

ಬಸವನ ಹೆಂಡೂತಿ ಹಸುಮಗಳು ನೀಲಮ್ಮ ।
ಬಸರಾದರ್‍ಹ್ಯಾಂಗ ನಡೆದಾಳ । ಗೋದಿಯ ।
ಸಸಿಯಾಗ ನವಿಲು ನಡಿದಾಂಗ ॥

ಮಕ್ಕಳ ತಾಯವ್ವ ಕೆಟ್ಟೆನೆನ್ನಲು ಬೇಡ ।
ಪಕ್ಷಿಜಾತ್ಯಾಗ ಗರುಡನು । ಹುಟ್ಟೂತ ।
ತಮ್ಮಮ್ನ ಸೆರೆಯ ಬಿಡಿಸ್ಯಾನ ॥

ಅಡವಿ ಆರ್‍ಯಾಣದಾಗ ಹಡೆದಾಳ ಸೀತಮ್ಮ ।
ತೊಡಿಯ ತೊಳಿಯಾಕ ನೀರಿಲ್ಲ । ಹನುಮಂತ ।
ಸೇತಗಟ್ಯಾನ ಸಮುದರಕ ॥

ಹಣೆಯ ಬರಹದ ಗೆರೆಯು ಹರೆದರು ತಪ್ಪದು ।
ಹರಿಚಂದರಾಯ ಸುಡುಗಾಡ । ಸೇರಿದರ ।
ಇದಿಯವನ ಬೆನ್ನ ಬಿಡಲಿಲ್ಲ ॥

ಸೀತಾನ ಅಭಿಮಾನ ಬಾಲ ಹನುಮನು ಕಾಯ್ದು ।
ದ್ರೌಪದಿಯ ಮಾನ ಹರಿ ಕಾಯ್ದು । ಪದ್ಮಾವತಿ ।
ನೀ ಕಾಯೆ ನನ್ನ ಅಭಿಮಾನ ॥

ರಾಮ ಬಿಟ್ಟಾ ಬಾಣ ರಾಜ್ಯಕ ಮುಟ್ಯಾವ ।
ರಾಮ ಸೀತೆಯರು ವನವಾಸ । ಹೊಂಟರ ।
ಹುಡುಕೂತ ಹೊಂಟ ಹನುಮಂತ

ದ್ರೌಪದಿಯ ಸೀರಿ ದುಸುಂವಾಸ ಸೆಳೆವಾಗ ।
ವಿಸವಾಸದಣ್ಣಗ ನೆನೆದಾಳ । ಶ್ರೀಕೃಷ್ಣ ।
ಮಾಯಾದ ಸೀರಿ ಮರಿ ಮಾಡೊ ॥

ರಾವಣನ ರಥದಾಗ ಅಡ್ಡ ಹಾರುವನ್ಯಾರ ।
ಅಂಜನಾದೇವಿ ಮಗ ಹನುಮ । ಬಿಟಬಾಣ ।
ದಂಡ ಸುತ್ತಾಕಿ ಬಡದಾವ ॥

ಆರು ಕಾಲಿನ ರಥವ ಏರಿ ಹೊಂಟವನ್ಯಾರ ।
ಸೂರ್ಯನಂಥವ ಅರ್ಜುನ । ಕೈಯಾನ ।
ಸಾರತ್ಯಾಗ್ಯಾನ ಶ್ರೀಕೃಷ್ಣ ॥

ಸೀತಾದೇವಿಯಷ್ಟು ಸಿರಿಯನುಂಡವರಿಲ್ಲ ।
ದ್ರೌಪದಿಯಷ್ಟು ಹರಲಿಯ । ಹೊತ್ತವರು ।
ಈ ಲೋಕದಾಗ ಯಾರಿಲ್ಲ ॥

ಬಾಗೋಡಿಯೆಂಬುದು ಬಾಲ್ಯಾರ ಪಟ್ಟಣ ।
ಮ್ಯಾಲೆ ಚೆನ್ನವ್ವನ ಅರಮನಿಯ । ಬಾಗಿಲದಾಗ ।
ಬಾಗಿ ನಿಂತಾನ ಬಸವಣ್ಣ ॥

ಎಲ್ಲಮ್ಮ ನಿನ್ನ ಮಗ ಎಳೆಯ ಪರಶುರಾಮ ।
ಯಾರು ತೂಗಿದರ ಮಲಗೊಲ್ಲ । ಕೈಲಾಸ ।
ಪಾರ್ವತಿ ತೂಗಿದರ ಸುಖನಿದ್ದಿ ॥

ಬಸವಣ್ಣನಂತಹ ಭಕ್ತಿವಂತರಿಲ್ಲ ।
ನೀಲಮ್ಮನಂಥ ಶರಣೆಯರಿಲ್ಲ । ಹೇಮರಡ್ಡಿ ।
ಮಲ್ಲಮ್ಮನಂಥ ಸೊಸಿಯಿಲ್ಲ ॥

ಚಾಮುಂಡಿ ಎಂಬೋಳು ಸೀಮೆಗೆ ದೊಡ್ಡವಳು ।
ಮಾಯಾದ ಬೂದಿ ಸೆರಗಲ್ಲಿ । ಕಟ್ಟಿಕೊಂಡು ।
ನ್ಯಾಯಕೆ ಮುಂದಾಗಿ ಹೊರಟಾಳು ॥

ಬೆಟ್ಟದ ಮೇಲವ್ವೆ ಬಿಡುಮುಡಿ ಚಾಮುಂಡಿ ।
ತೊಟ್ಟವ್ವೆ ಹುಲಿಯ ಚರುಮಾವ । ಚಾಮುಂಡಿ ।
ಮೆಟ್ಟಿ ನಿಂತವ್ವೆ ರಣದಲ್ಲಿ ॥

ಅಣ್ಣ ಬಾರರ್ಜುನ ತಮ್ಮ ಬಾ ಸಹದೇವ ।
ಹೊನ್ನ ಬಿಲ್ಲಡೆದ ಕಲಿಭೀಮ । ಬಾರೆಂದು ।
ಬಣ್ಣಿಸಿ ಕುಂತಿ ಕರೆದಳು ॥

## ಐತಿಹಾಸಿಕ

ಮಂದಿ ಮಾಳಿಗಿ ಏರಿ ದುಂಡು ಚಾವುಡಿ ಏರಿ ।
ನೋಡ್ರೆ ಹಲಸಂಗಿ ಐಸೀರಿ । ಹೈದರನ ।
ಆನೀಗಿ ಕಟ್ಟಿ ಎಳಸ್ಯಾರ ॥

ಬಿದ್ದಾನೊ ಬಿದ್ದಾನೊ ಬಿಳಿಯಂಗಿ ಮ್ಯಾಲಾಗಿ ।
ರುದ್ರು ಜೋಡಂಗಿ ರಗತಾಗಿ । ಹೈದರ ।
ಬಿದ್ದ ಹಲಸಂಗಿ ಹರಿಯುಲಿ ॥

ನರಗುಂದ ಕಾಳಪನ ಮರಿಗುದರಿ ಸಾಯಲಿ ।
ಚಿದುರಂಗ ಮಾಲ ಮುರಿಯಲಿ । ಸೊರಟೂರ ।
ಸದರೀಗಿ ಸುದ್ದಿ ಬೈಲಾಗ ॥

ಕಿತ್ತೂರ ಚನ್ನಮ್ಮ ಕಿತ್ತೂರ ಬಿಡವಳ್ಳ ।
ಏಳು ನೂರೆಮ್ಮಿ ಎಳೆಗರ । ಹೊಡಕೊಂಡು ।
ಹಂಗಿಲ್ಲದ್ದಾದಿ ಹಿಡಿದಾಳ ॥

ಪಟ್ಟಣಕ್ಕುಂಚಾಗಿ ಹುಟ್ಟಿತು ಮೈಸೂರು ।
ಬೆಟ್ಟದ ಚಾಮುಂಡಿ ದಯದಿಂದ । ದೊರೆಗೋಳು ।
ಪಟ್ಟಣವಾಳ್ಯಾರು ಅನುಗಾಲ ॥

ಮಲ್ಲಿಗೆ ಹೂ ಕೊಯ್ದು ದುಂಡುಮಾಲೆಯ ಕಟ್ಟಿ ।
ಮೈಸೂರ ದೊರೆಗಳು ಕಳಿಸ್ಯಾರು । ಏನೆಂದು ।
ಭೋಗಿ ಮಲ್ಲಯ್ಯನ ಮದುವೆಗೆ ॥

ನಂಜನ್ಗೂಡಿನೋರು ತೆಂಗಿಂತೋಪಿನೋರು ।
ಗೊಂಬೆತೇರಲ್ಲಿ ಮೆರೆವೋರು । ಚಾಮುಂಡಿ ।
ನಂಜುಂಡ ಕಾಣೆ ಕದ ತೆಗೆಯೆ ॥

## ವರ್ಣನೆ

ಛಂದಕ ನಮ್ಮವರು ಮಾವೀನ ಬನ ಹಚ್ಚಿ ।
ಗಿಡಕೊಂದು ಗಿಣಿಯು ಸಲುವ್ಯಾರ । ಬ್ಯಾಡಯ್ಯ ।
ಗಿಣಿ ಬೆದರ್‍ಯಾವಣ್ಣ ಬರಬ್ಯಾಡ ॥

ಪಾಗೀಯ ಮಳಿಗಾಲ ಹ್ಯಾಂಗಿದ್ದಿ ಕೋಗೀಲ ।
ಆಗರ ಭಾಳ ಆಡಕೀಯು । ಬನವಾಗ ।
ಕೂಗ್ಯಾಡಿ ಹೊತ್ತು ಕಳಿದೇನ ॥

ಹಾಂವು ಅಂದರ ಜೀವ ಹರಣವ ಹಾರ್‍ಯಾವ ।
ಹಾಂವಲ್ಲ ಪಂಚಿ ವಿರುಪಾಕ್ಷಿ । ನಿನ ಮುಂದ ।
ಹಾಂವಾಗಿ ಗಂಗಿ ಹರದಾಳ ॥

ಓಪ್ಪಿ ಹೂವಿಗಾಗಿ ಹೆತ್ತತಾಯಿಯು ಕೊಂದು ।
ಮತ್ತ ಕೋಗಿಲ ಮರನೇರಿ । ಕೂಗಿದರ ।
ಹೆತ್ತವ್ವ ಎಲ್ಲಿ ದೊರೆತಾಳ ॥

ಹಚ್ಚನ ಮೈಯವ ಹವಳದ ತುಟಿಯವ ।
ಎತ್ತ ಹೋಗಿದ್ಯೊ ಗಿಣಿರಾಮ । ತವರವರ ।
ಉತ್ತತ್ತಿ ಬನಕ ಉಲುವಿಲ್ಲ ॥

ಹಳ್ಳದ ಹೊಲದಾಗ ಬೆಳ್ಳನ ಬಿಳಿಜೋಳ ।
ಮೆಲ್ಲಕ ಮೆಲಿಯೋ ಗಿಣಿರಾಮ । ನನ್ನಣ್ಣ ।
ಕಲ್ಲ ಬಂದಾವು ಕಡಿಗಾಗೊ ॥

ಗಿಡದಾಗ ಗಿಡ ಛೆಲುವ ಮಾವಿನ ಗಿಡ ಛೆಲುವ ।
ಹಕ್ಕಿಪಕ್ಕ್ಯಾಗ ಗಿಣಿ ಛೆಲುವ । ಮ್ಯಾಲೀನ ।
ಚುಕ್ಕ್ಯಾಗ ಚೆಲುವ ಚಂದ್ರಾಮ ॥

ಬೆಳ್ಳಗ ಬೆಳಗಾಗಿ ಬೆಳ್ಳಿ ಮೂಡಲವಾಗಿ ।
ಒಳ್ಳೊಳ್ಳೆ ಮೀನ ಗರಿ ತೆಗೆದು । ಆಡ್ಯಾವ ।
ಗರತಿ ಗಂಗಮ್ಮನ ಉಡಿಯಾಗ ॥

ವರಳ ಸುತ್ತ್ಲೆ ಅಕ್ಕಿ ಕೊರಳ ಸುತ್ತ್ಲೆ ಮುತ್ತ ।
ಗುಡಿಸುತ್ತ ಘೂಳಿ ಬಸವಣ್ಣ । ಸೊನ್ನಲಗಿ ।
ಸಿದ್ದರಾಮನ ಸುತ್ತ ಸಿರಿಗಂಗಿ ॥

ಹಳ್ಳದ ದಂಡೀಗಿ ಹಸರಬಣ್ಣದ ಗುಬ್ಬಿ ।
ಬಿಸಲೀಗಿ ಬಾಯಿ ಬಿಡತಾದ । ಆ ಗುಬ್ಬಿ ।
ಕುಸಲದ ನಗುವ ನಗತಾದ ॥

ಚಿಂಚಲ ದಾರ್‍ಯಾಗ ಮಿಂಚೂದು ಏನಣ್ಣ ।
ಕಂಚಗಾರಣ್ಣ ತಿದಿ ಊದಿ । ಚಿಂಚೂಲಿ ।
ಮಾಯವ್ವಗ ಕಳಸಾ ಮಾಡ್ಯಾನ ॥

ಮೂಡಲ್ಮುತ್ತಿನ್ಕೆರೆ ನೋಡೋರಿಗೊಂದ್ವೈಭೋಗ ।
ಮೂಡಿ ಬರ್ತಾನೆ ಚಂದ್ರಾಮ । ತಾನೆದ್ದು ।
ಓಡಿ ಬರ್ತಾನೆ ಚಂದ್ರಾಮ ॥

ಬಂಡೀಯ ಹೊಡಿಯೋನ ಬಂಡಾಟ ನೋಡೀರೋ ।
ನೀರುಳ್ಳಿ ಗೆಡ್ಡೆ ಒಣರೊಟ್ಟಿ । ತಕ್ಕೊಂಡು ।
ಹಳದಡಡೆ ಬಾಯ ಬಿಡತಾನೆ ॥

ಆಕಾಶಕಂಬು ಬಿಟ್ಟ ಮುಗಿಲಿಗೆ ಬಾಣ ಬಿಟ್ಟ ।
ಮಳಲಲ್ಲಿ ಕಾಸೆ ಒದರುಟ್ಟ । ಚೆಲುವಯ್ಯ ।
ಸೂಳೆಮನೆಗ್ಹೋಗೊ ಸಡಗರ ॥

ಎಲೆ ಜಾಣ ಚೆಲುವಯ್ಯ ಜಾತರಿಗೆ ಹೋಗಾಗ ।
ಜಾರಿ ಬಿದ್ದಾವೆ ಚಿಗುರೆಲೆ । ಸೂಳೇರ ಹುಡುಗಿ ।
ತಾಳೆ ಹೂವೇದು ಮುಡಿದಾಳೆ ॥

ಕರಿಯ ಕಾಗೀನ ಸೀರೆ ಗರಿಯೊಡೆದ ಹೊಂಬಾಳೆ ।
ತರಿಯ ಕೆರೆಯೆಂಬೊ ದೊರೆಗಳು । ಕಳ್ಳಿದ ಬಣ್ಣ ।
ಶಿವದಾರದ ಮೇಲೆ ಹೋಳಿದ್ದವೆ ॥

ಕರಿಯ ಕುದುರೆಯನೇರಿ ಕರಿಯವ್ವ ಸವ್ವಾರಿ ಹೊರಟು ।
ಕಿರುಜಡೆ ಬೆನ್ನ ಒಲವುತ । ಅಂತರಗಟ್ಟಿ ।
ಕೆಂಗಾಡಾಗಿಳಿದೊ ಕುದುರೆಯ ॥

ಕೊಣಬೆ ಗೌಡೆಂಬೋದು ಒಲು ದೊಡ್ಡ ಸಾವುಕಾರ ।
ಕೂರೀಗೆ ನೂರು ಕುಡನೂರು । ಗೌಡನ್ನ ।
ಆರಂಬದೆತ್ತು ಐನೂರು ॥

ಒಂದು ಬಂಡಿಲಿ ಕಲ್ಲು ಒಂದು ಬಂಡಿಲಿ ಮುಳ್ಳು ।
ಹಿಂದಲ ಬಂಡೀಲಿ ರಣದುರಗಿ । ಕೂತುಕೊಂಡು ।
ಹೊಕ್ಕಾಳು ಕೊಣಬಿಗನರಮನೆಗೆ ॥

ಎಣ್ಣೆ ಗೊರವನ ಹಕ್ಕಿ ನಾಗಾಭರಣದ ಹಕ್ಕಿ ।
ಹಾರ್‍ಯಾವೆ ಹಕ್ಕಿ ಗಗನಕ್ಕೆ । ಮುತಿಗಟ್ಟದ ।
ಸಾಲಳ್ಳಿ ಮರದ ನೆರಳೀಗೆ ॥

# ಸಂವಾದ

(೧)

ಚಿಂತಾಕು ಇಟಗೊಂಡು ಚಿಪ್ಪಾಟಿ ಬಳೆವಾಕಿ ।
ಚಿಂತಿಲ್ಲ ಏನ ನಿನಗಿಷ್ಟು । ನಿಮ ರಾಯ ।
ಅಲ್ಲೊಬ್ಬ ಕೂಡ ನಗುತಿದ್ದಾ ॥

ನಕ್ಕರೆ ನಗಲೆವ್ವಾ ನಗೆಮುಖದ ಖ್ಯಾದೀಗಿ ।
ನಾ ಮುಚ್ಚಿ ಮುಡಿವ ಪರಿಮಳ- । ದಾ ಹೂವ ।
ಅವಳೊಂದು ಘಳಿಗೆ ಮುಡಿಯಲೆ ॥

(೨)

ಬೀಸಲಾರದೆ ಹೋಗಿ ಬೀದ್ಯಾಗ ನಿಂತೇನ ।
ದೇಸಾಯಿ ಅಣ್ಣ ಕರೆದೊಯ್ಯೊ । ನಿನ ಮನಿಯ ।
ಕೂಸೆತ್ತಿ ಹೊತ್ತುಗಳದೇನ ॥

ಕೂಸನಾದರು ಎತ್ತಿ ಏಸು ದಿನ ಕಳೆದವ್ವ ।
ಲೇಸ್ಹೋಗು ನಿನ್ನ ಒಗೆತನ- । ಕಿದ್ದರ ।
ಏಸೊಂದು ಬಣ್ಣ ಉಡಿಸೇನ ॥

(೩)

ಮಾತೀನ ಮಂಡದೀಗಿ ಸೂತರದ ಗೊಂಬೀಗಿ ।
ಯಾತರಲೆ ಹೊಡದಿ ನನ ತಮ್ಮ ॥

ಕಾಕಿಹಣ್ಣಲಿ ಹೊಡೆದ ಕಮಳದೂವ್ವಿನಲಿ ಹೊಡೆದ ।
ತ್ವಾಟದಾಗಿರುವ ಗಜಲಿಂಬಿ- । ಲ್ಹೊಡೆದರ ।
ಮೋಜಿಲಳತಾಳೆ ಹಡೆದವ್ವ ॥

(೪)

ಸರದು·ನಾ ಮಲಗಟಿಗೆ ಸರಗೀಯ ಕೊಂಡ್ಯೊತ್ತಿ ।
ಕಾಲುಂಗರ್‍ಯೊತ್ತಿ ಬಳಿಯೊತ್ತಿ । ರಾಯರ ।
ನತ್ಯೊತ್ತಿ ನಿದ್ದಿ ಬಾರದ ॥

ಜಾಡಿ ಜಮಖಾನ್ಯೊತ್ತಿ ಕಂಬಳಿಯ ಕರಿಯೊತ್ತಿ ।
ಉಂಗುರುಡುಗೊಣಿ ಖಡೆಯೊತ್ತಿ । ಸತಿಯಳ ।
ಮುರುವೊತ್ತಿ ನಿದ್ದಿ ಬಾರದ ॥

(೫)

ಕೆಂಪನ ಹೆಣ್ಣೀಗಿ ಸಂಪೀಗಿ ತೆನಿಯೆಂದ ।
ಅಂತರಲೆ ಬೆಳೆವ ಎಳೆ ಹುಣಚಿ । ಕಾಯ...
ಎಂಥವರು ಬಾಯಿ ಬಿಡತಾರ ॥

ಕರ‍್ರನ ಹೆಣ್ಣೀಗಿ ಕಮಳದ ಹೂವೆಂದ ।
ಕರಲಾಗ ಬೆಳೆವ ಕಡಲೀಯು । ಗಿಡಕಾಗಿ ।
ಧೊರಿಮಗ ತೇಜಿ ಇಳಿದಾನ ॥

(೬)

ಹೆಸರೀಗಿ ರಬಕವಿ ಮೊಸರೀಗಿ ನೀರಿಲ್ಲ ।
ಕುಸಲದ ಸಿಂಬಿ ಬರಿಗೊಡ । ಬಾಲ್ಯಾರು ।
ಉಸ್ಸೆಂದು ಭಾವಿ ಇಳಿದಾರ ॥

ಚಂದಕ ನಿಂಬರಗಿ ಗಂಧಕ ನೀರಿಲ್ಲ ।
ಟೆಂಗಿನ ಪರಟಿ ಬರಿಗೊಡ । ಬಾಲ್ಯಾರ ।
ರಂಬ್ಯಾರ ಜಗಳ ಒರತ್ಯಾಗ ॥

(೭)

ಸಂಜಿ ಹೊಟ್ಟಿಗಿ ಮಾಡಿ ಗಂಗಿ ನೀರಿಗಿ ಹೋದ ।
ಗಂಗಮ್ಮ ತಾಯಿ ಕೊಡನೆತ್ತ ॥

ಯಾರಂತ ಎತ್ತಲಿ ಯಾರಂತ ಹೊರಿಸಲಿ ।
ಯಾರಂತ ಕೊಡವ ನೆಗವಲಿ ॥

ದೊಡ್ಡವರ ಸೊಸಿ ನಾನು ಧರ್ಮರಾಯರ ಮಗಳು ।
ಸೂರ್ಯ ಚಂದ್ರನ ಹಿರಿತಂಗಿ । ಬಂದೀದ ।
ಗಂಗಮ್ಮ ತಾಯಿ ಕೊಡನೆತ್ತ ॥

(೮)

ಅಣ್ಣನ ಮನೀಗಿ ಹೆಣ್ಣ ಬೇಡಲಿ ಹೋದ ।
ಕನ್ನಡಿಗೋಡಿ ಮರಿ ಮಾಡಿ । ಅತ್ತೀಗಿ ।
ಕಣ್ಣ ಚಿವುಟ್ಯಾಳ ಪುರುಷಗ ॥

ಕಣ್ಣ ಚಿವುಟಲು ಬ್ಯಾಡ ನಿನ್ಹೆಣ್ಣ ನಾನೊಲ್ಲೆ ।
ಅನ್ನಿಗರ ಮಗಳು ಅತಿ ಛಲುವಿ । ಮಾಡಿಕೊಂಡು ।
ನಿನ್ನೂರ ಮ್ಯಾಲ ಬರುವೇನ ॥

(೯)

ಎದ್ದು ಎಷ್ಟೊತ್ತಾಯ್ತು ನನಗೂಡ ಮಾತಿಲ್ಲ ।
ಏನಂದ್ಯೊ ಬಾಳ ಮಂಡದೀಗಿ ॥

ಅಂದಿಲ್ಲ ಆಡಿಲ್ಲ ಅಂಗೈಮಾರ್ಹೆಣ್ಣೀಗಿ ।
ಅಂಗೈಯ ಹಚ್ಚಿ ಹೊಡದಿಲ್ಲ । ಅಕಿ ತನ್ನ ।
ತವರ್ಹಂಬಲ ಮಾಡಿ ಅಳತಾಳ ॥

(೧೦)

ಅಡಗೀಯ ಮನಿಯಾಗ ಅರವತ್ತು ಗಂಗಾಳ ।
ಬೆಳಗತೀನತ್ತಿ ಬೈಬ್ಯಾಡ । ತವರವರು ।
ಸರಮುತ್ತು ಮಾಡಿ ಸಲವ್ಯಾರ ॥

ಸರಮುತ್ತುಗಳನೊಯ್ದು ಸಾಲ ಬೂದಿಗೆ ಹಾಕ ।
ಹೊರಬಾರ ಹೆಂಡಿ ಹೆಡಗೀಯ ॥

ಹೆಂಡ್ಹೆಡಗಿ ಹೊರಲಾಕ ಬಡವರ ಮಗಳೇನ ।
ಮುಂದಿನೂರಾಗ ತವರವರು । ಕೇಳಿದರ ।
ಮುಂಜಾನೆ ತೊತ್ತು ಖಳವ್ಯಾರ ॥

(೧೨)

ಹಣ್ಣ ಹಾಗಲಕಾಯಿ ಎಣ್ಯಾಗ ಕರದೀನ ।
ಉಂಡಽರೆ ನೋಡು ಸವಿಗಾರ । ನನ್ನ ಮ್ಯಾಲ ।
ತಂದಾರೆ ನೋಡು ಸವತೀಯು ॥

ಸವತೀನ ತರಲಾಕ ಸಾವಕಾರ ನಾನಲ್ಲ ।
ಶೆಟ್ಟರ ರೊಕ್ಕ ನನಗಿಲ್ಲ । ಕಟ್ಟಾಣಿ ।
ಕಷ್ಟದ ಜೀವಿ ಕಡುಬಡವ ॥

ಶೆಟ್ಟರ ರೊಕ್ಕಲ್ಲ ಸ್ಥಿರವೇನೊ ನನರಾಯ ।
ರೊಕ್ಕದ ಚಿಂತಿ ನನಗಿಲ್ಲ । ಪತಿರಾಯ ।
ನಿಮಗಾಶಿ ಬೇಡೀನನುಗಾಲ ॥

(೧೩)

ಅತ್ತೆ ಸತ್ತರೆ ಸೊಸೆಯು ಏನೆಂದು ಮರಗುವಳು ।
ಹಿತ್ತಲ ಕದವ ತಡಕೊಂಡು । ನಮ್ಮನೆ ।
ಮೃತ್ಯು ದೇವತೆಯೆ ತೊಲಗೀತು ॥

ತಾಯಿ ಸತ್ತರೆ ಮಗಳು ಏನೆಂದು ಕೊರಗುವಳು ।
ಬಾಗಿಽಲ ಕದಽ ತಡಕೊಂಡು । ನಮ್ಮನೆ ।
ಭಾಗ್ಯ ದೇವತೆಯೆ ನಡೆಯಿತು ॥

(೧೪)

ಕಗ್ಗಲ್ಲು ಒನಕೆ ಕರಿಯಮಲ್ಲಿಗೆ ಶಾಮೆ ।
ಒಬ್ಬಳಿಗೊಂದೊಬ್ಬೆ ಸವೆಯಾದೊ । ಅಣ್ಣಯ್ಯ ।
ಎಬ್ಬೀಸು ನಿನ್ನ ಮಡದೀಯ ॥

ಎಬ್ಬಿಸೋದು ಯಾಕ ನಿದ್ದಿಗೆಡಿಸೋದ್ಯಾಕೆ ।
ಎರಡೊಬ್ಬೆ ಮಾಡಿ ತಳಸಿಽಡು । ತಂಗೆವ್ವ ।
ಮಂಡೆ ನೋವೆಂದು ಮಲಗ್ಯಾಳಽ ॥

(೧೫)

ಹಟ್ಟಿ ಕಲ್ಲು ದಾಟಿ ಹರಿಯ ಸಮುದ್ರ ದಾಟಿ ।
ಮತ್ತೆ ಜಾನಕಿ ಮನೆದಾಟಿ । ಬಂದೀನಿ ।
ಅತ್ತೆಯ ಮಗಳೆ ಮುಖ ತೋರೆ ।
ಅತ್ತೆಯ ಮಗಳೆ ಮುಖತೋರೆ । ನಿನ್ನಿಂದ ।
ತಾಯಿ ತಂದೆಯ ತೊರೆದೀನೆ ॥

ಹಾದಿಕಲ್ಲು ದಾಟಿ ಹತ್ತು ಸಮುದ್ರ ದಾಟಿ ।
ಮತ್ತೆ ಜಾನಕಿ ಮನೆದಾಟಿ । ಬಂದೀನಿ ।
ಅತ್ತೆಯ ಮಗನೆ ಮುಖ ತೋರೋ ।
ಅತ್ತೆಯ ಮಗನೆ ಮುಖತೋರೋ । ನಿನ್ನಿಂದ ।
ತಾಯಿ ತಂದೆಯ ತೊರೆದೀನೆ ॥

(೧೬)

ಹಟ್ಟೀಲಿ ಗಿರಿಜಮ್ಮ ಕುಟ್ಟುತೇನೆಂದಳು ।
ಅಪ್ಪಾಜಿ ನನ್ನ ಕೊಡಬೇಕು । ಬೆಟ್ಟದ ।
ಎಪ್ಪತ್ತೊಂದು ಜಡೆಯ ಶರಣರಿಗೆ ॥

ಹಾದೀಲಿ ಉಣ್ಣೋರು ಬೀದೀಲಿ ಒರಗೋರು ।
ತ್ಯಾಗದಲಿ ಹಿಡಿದು ತಿರಿದುಂಬೊ । ಜೋಗೀಯ ।
ಏನು ಮೆಚ್ಚಿದೆ ಸಿರಿಗಿರಿಜೆ ॥

ಹಾದ್ಯವ್ರ ಅರಮನೆ ಬೀದೆವ್ರ ಪಟ್ಟಸಾಲೆ ।
ತ್ಯಾಗದೆಲೆ ಅವ್ರ ಹರಿವಾಣ । ಅಪ್ಪಾಜಿ ।
ಹ್ಯಾಗಿದ್ರು ಕೊಡಬೇಕು ಶಿವನಿಗೆ ॥

ಹಾದಿಯ ಅರುಬೇಯ ಜೋಡಿಸಿ ಆಯೋರು ।
ಆಯದಲಿ ಕಂತೆ ಹಿಡಿಯೋರು । ಗೊರವನ ।
ಏನು ಮೆಚ್ಚಿದೆ ಸಿರಿಗಿರಿಜೆ ॥

ಆಕಾಶೆಂಬೋದು ಇಲ್ಲಿಗೆ ಕಾಣೊದಿಲ್ಲ ।
ನರರಿಲ್ಲ ನರರ ಸುಳಿವಿಲ್ಲ । ಆ ಕೋಟ್ಗೆ
ಮಗಳೆ ಸಿರಿಗೌರಿ ಮನಸಾದೆ ॥

ಆಕಾಶ ಎಂಬೋದು ಇಲ್ಲಿಗೂ ಕಾಣತೈತೆ ।
ನರರುಂಟು ನರರ ಸುಳಿವುಂಟು । ತಾಯವ್ವ ।
ಹ್ಯಾಗಿದ್ರು ನಮ್ಮ ಕೊಡಬೇಕು ॥

(೧೭)

ಹತ್ತಂಕ್ಣದರಮನೆ ಮೇಲೆ ಬೋದಿಗೆ ಸಾಲು ।
ಮಾಡಿಇಯ ಮೇಲೆ ಮಲಗಿರೋ । ಮಲ್ಲಯ್ಯ ।
ಓಲೆ ಬಂದಾವ ಓದೇಳೋ ॥

ಓಲೆ ಬಾದಿದ್ರೆ ನಾಳೆ ಓದಿಕೊಂಡೇನು ।
ಅತ್ತೆ ಮಗಳು ಸಿರಿಗಿರಿಜೆ । ಕೈಲಿರುವ ।
ಮುತ್ತಿನುಂಗುರವ ಗೆಲಬೇಕು ॥

(೧೮)

ಹೇರುಕಟ್ಬಾಗ ಬಾರಕೋಲು ನಾ ಮರೆತೆ ।
ಕಂಡು ಕೊಡು ಹೆಣ್ಣೆ ಕಡುಗಾತಿ । ನಮ್ಮೆತ್ತು ।
ಮುಂದೆ ಮೂರ್ಹೆಜ್ಜೆಯಿಡೋದಿಲ್ಲ ॥

ಹೋರಿ ಮೇಲೆ ಕೂತು ಕೋರಿಯ ನಾ ಕಂಡೆ ।
ಊರುವಸಿಯಂಥ ಮೊಕದವಳ । ನೀ ಕಂಡು ।
ಹೋರಿ ಹೊಡೋಕೆ ಮನಸಿಲ್ಲ ॥

(೧೯)

ಮಾವನ ಮಗಳೇ ಕೋಗಿಲೆಯ ದನಿಯವಳೆ ।
ತಾವರೆ ಮೊಗ್ಗಿನ ಮೊಲೆಯವಳೆ । ಮಾವ್ನಮಗಳೆ ।
ಬಾಯಾರಿ ಬಂದೆ ನೀರ್‌ಕೊಡೆ ॥

ನೀರು ಕೊಡಲಾರೆಕೆ ನಾನ್ಯಾರೊ ನೀನ್ಯಾರೋ ।
ಹೋಗಯ್ಯ ಹರಿಯೋ ಹೊಳೆಗಾಗೀ ॥
ಹರಿಯೊ ನೀರ್ ಹಚ್ಚಗೆ ಕೆರೆಯ ನೀರ್ ಬೆಚ್ಚಗೆ ।
ನೀ ಕೊಟ್ಟ ನೀರು ಸವುರುಚಿ ॥

ನಾ ಕೊಟ್ಟ ನೀರು ಸವುರುಚಿಯಾದರೆ ।
ಕುಲದಾಗೆ ದಂಡ ಬರುತೈತೆ ॥

ದಂಡವ ಕೊಟ್ಟೇನು ಹಿಂಡೆಮ್ಮೆ ಹೊಡಿಸೇನು ।
ಬಂಡೀಲಿ ಬದುಕ ಕಳುಹೇನು । ಮಹಾಮ್ಮ ಮಗಳೆ ।
ಬಂದೀಯ ತೋಳ ಬಿಡಲಾರೆ ॥

(೨೦)

ಕುಸುಮಾಲಿಯೆಂದೀಗ ಹೊಸಮಾತನಾಡದಿರೊ ।
ದಶರಥರಾಯ ಹಿರಿಯಣ್ಣ । ಕೇಳಿದರ ।
ಹಸಿಯ ಶೂಲಕ ಹಾಕಿ ಕೊಲಿಸ್ಯಾನೋ ॥

ಹಸಿಶೂಲಕ್ಹಾಕಿಸಲಿ ಬಿಸಿನೆತ್ರ ಹರಿಸಲಿ ।
ಮಸೆದ ಕತ್ತಿಲಿ ಕಡಿಯಲಿ । ನನ ತಲೆಯ ।
ಬಂದೀಯ ತೋಳ ಬಿಡೆನಲ್ಲೆ ॥

(೨೧)

ಹಟ್ಟೀಲಿ ನಿಂತ್ಕೊಂಡು ಬಟ್ಮುತ್ತ ಕೇರೋಳೇ ।
ನಿಮ್ಮಟ್ಟಿಲಿ ಬೀಡಿಕೆ ಬಿಡಲೇನೆ ॥

ಬೀಡಿಕೆ ಬಿಡೋಕೆ ಅತ್ತಿಲ್ಲ ಮಾವಿಲ್ಲ ।
ಚಿಕ್ಕೋರು ಮೈದರಸು ಮೊದಲಿಲ್ಲ । ಮುತ್ತಿನ್ಸೆಟ್ಟಿ ।
ನಮ್ಮಟ್ಟೀಲಿ ಬೀಡಿಕೆ ಬಿಡಬೇಡ ॥

ಅತ್ತೆ ಇಲ್ದಿದ್ರೇನು ಮಾವಾ ಇಲ್ದಿದ್ರೇನು ।
ಚಿಕ್ಕೋರು ಮೈದರಸು ಮುತ್ತಿನಂತೋರು ।
ಮುತ್ತು ತೆಗೆಯೋಕೆ ಅತ್ಯಾಕೆ । ಮಾವ್ಯಾಕೆ ।
ನೀ ಒಪ್ಪಿದ ಸರವ ತೆಗಿಬಾರೆ ॥

(೨೨)

ಸಂಗಾತಿ ನೀ ಬಾರೆ ಮೂಡ ಸೀಮೆಯ ಹೆಣ್ಣೆ ।
ಉಂಗುರವ ತಾರೆ ಬೆರಳಿಽಗೆ । ಹಂತದ ।
ರಂಭೆ ನಿನ್ನ ಹ್ಯಾಂಗ ಮರೆಯಽಲಿ ॥

ಮೂಡ ಸೀಮೆಯ ಹೆಣ್ಣು ಬೇಡೆನಗಣ್ಣಯ್ಯ ।
ನೀಡಿದ ಕಾಲ ತೆಗೆಯಽಳು । ಆ ಬಾಲಿ ।
ನೆರೆಯರಿಗೆ ಅಂಜಿ ಬಾಳ್ಯಾಳೆ ॥

(೨೩)

ಕಾದ ಓಡಿನ್ಹಾಂಗ ಉರಿದ ಹಂಚಿನ್ಹಾಂಗ ।
ನಾದಿನಿ ಬಂದಾಳ ತವರೀಗಿ । ಈಗೀಗ ।
ನಾದೀನಿ ಬಂದಾಳ ತವರೀಗೆ ॥

ಒಂದಿನ ವರುಷದಲಿ ಒಂದೊಂದು ಮಾತಾಡಿ ।
ಒಂದೊಂದು ಭಂಗ ಪಡಿಸಿದಳು । ನಾದಿನಿ ।
ಈಗೇನ ಮಾಡುವಳೊ ನಾಕಾಣೆ ॥

ಸಾಮೆ ಕುಟ್ಟು ಎಂದರೆ ಕಾಲೆ ಮಾಸಿತೆಂದಳು ।
ಮಡದೀಯ ಕಳಿಸಿ ಆಚೆಽಗೆ । ನಿಮ್ಮಯ ।
ಅಂದಣವ ಕಳಿಸಿ ಆಚೆಗೆ ॥

(೨೪)

ಅಣ್ಣನಾ ಮನೆಗೆ ಹೆಣ್ಣಿಗ್ಹೋದಳು ತಂಗಿ ।
ಸುಣ್ಣದ ಗೋಡೆ ಒರಗಿದ್ಲು । ಅಣ್ಣಯ್ಯ ।
ಹೆಣ್ಣು ಕೊಡುಬಾರೊ ಮಗನೀಗೆ ॥

ಹೆಣ್ಣ್ಗೆ ಬರುವ ತಂಗಿ ನಿನ್ನೆ ಮೊನ್ನೆ ಬರುವಿರಿ
ನಿನ್ನೊಂದು ಪಟ್ಟದೊರೆಗಳು । ನಮ್ಹೆಣ್ಗೆ ।
ಹೊನ್ನ ಕಂಕಣ ತೊಡಿಸ್ಹೋದ ॥

(೨೫)

ಬೇಸಗೆ ಬಿಸಲಲ್ಲಿ ಯಾಕ ಬಂದೆ ಗೌರವ್ವ ।
ನೀ ಬಾಡಿ ನಿನ್ನ ಮುಖಬಾಡಿ । ಕೈಗಳ ।
ಬಿಳಿ ಎಲೆ ಬಾಡಿ ತರಗಾದೇ ॥

ಎಂದಿಲ್ಲ ಗೌರವ್ವ ಇಂದೇನು ಬಗಿ ಬಂದೆ ।
ಕುಂಡ್ರಾಕೆ ಕೊಡಿರಿ ಮಣಿಚೌಕಿ । ಸಿರಿಗೌರಿಗೆ ।
ಮುಖ ತೊಳ್ಯಾಕೊಡಿರೆ ಬಿಸಿ ನೀರ ॥

ಕುಂಡರ ಬಂದಿಲ್ಲ ನಿಂದರ ಬಂದಿಲ್ಲ ।
ಶಿವರಾಯ ನನ ಮೇಲೆ ಸವತೀಯು । ತಂದಾನಂತ ।
ಚಿಂತೇಲಿ ನಾನು ಬಂದೀನ ॥

ದೇಶವನಾಳುವಗ ಏಸೊಂದು ಹೆಂಡಿರೊ ।
ಈಸೋದು ಚಿಂತೆ ನಿನಗ್ಯಾಕ । ಸಿರಿಗೌರಿ ।
ಲೇಸ್ಹೋಗು ನಿನ್ನ ಅರಮನ್ಗೆ ॥

ಕಿಡಿಕಿಡಿನಾದಾಳ ಕಿಡಿಚಂಡನಾದಾಳ ।
ಎಡವೀದಬೆರಳೋದರವಿಲ್ಲ । ಗೌರವ್ವ ।
ಬಂದಾಳ ತನ್ನ ಅರಮನಿಗೆ ॥

ಉಟ್ಟುಗೊಳೆ ಸೀರೆ ತೊಟ್ಟುಗಳೆ ರವಿಕೆಯು ।
ಹುಯ್ಕೊಳೆ ಮುತ್ತ ಮಡಲೀಗೆ । ಅಕ್ಕಯ್ಯ ।
ಕಾಡದೆ ಹೋಗ ತವರೋರ ॥

ಕಾಷಾಕೆ ಬೇಡಾಕೆ ಕಾಡ ಗೊಲ್ಲರೇನೋ ।
ನಾಡ ಮೇಗಲ ನಡತೆಯು । ನಡೆಯದಿದ್ರೆ ।
ಆಡಿಕೊಂಬೋರು ಜನರೆಲ್ಲ ॥

(೨೬)

ಅಕ್ಕನ ಬೆಸಗೊಂಡೆ ತಂಗಿಯ ಬೆಸಗೊಂಡೆ ।
ಅಕ್ಕತಂಗೇರ ಹಿಂದ್ನ ಬಳಗವ । ಬೆಸಗೊಂಡೆ ।
ಸುಮ್ಮನೆ ಹೆಣ್ಣು ಕೊಡಬಾರೋ ॥

ಹಾಲುಬಾನುಣ್ಣೋಳು ಹವಳಕೇರಾಡೋಳು ।
ಆಚೆ ಕೇರೀಲಿ ಪಗಡಿಯು । ಆಡುವ ಮಗಳ ।
ದೂರದ ಸೀಮೆಗೆ ಕೊಡಲಾರೆ ॥

ಹಾಲಬಾನುಣ್ಣಲೊ ಹವಳಕೇರಾಡಲೊ ।
ಆಚೆ ಕೇರೀಲಿ ಪಗಡೆಯು- । ನಾಡಲಣ್ಣ ।
ನಿನ ಮಗಳ ನಮಗೆ ಕೊಡಬೇಕು ॥

ತುಪ್ಪಬಾನುಣ್ಣೋಳು ಮುತ್ತ ಮೊಗದಾಡೋಳು ।
ಪತ್ತಿರದ ಬೀದಿಲಿ ಪಗಡೆಯು । ಆಡುವ ಮಗಳ ।
ದೂರದ ಸಿಮೆಗೆ ಕೊಡಲಾರೆ ॥

ತುಪ್ಪ ಬಾನುಣ್ಣಾಳೊ ಮುತ್ತ ಮೊಗದಾಡಲೊ ।
ಹತ್ತಿರದ ಬೀದೀಲಿ ಪಗಡೆಯ । ಆಡಲಣ್ಣ ।
ನಿನ ಮಗಳ ನಮಗ ಕೊಡಬೇಕು ॥

ಒಂದರಬಿ ಹಾಸಿದ್ದೆ ಒಂದರಬಿ ಹೊಚ್ಚಿದ್ದೆ ।
ಒಂದೊರುಷ ನಾನು ಸಲಹಿದ । ಮಗಳನ್ನ ।
ನಿನ ಮನೆಗೆ ನಾನು ಕೊಡಲಾರೆ ॥

(೨೭)

ಕಕ್ಕಿ ಕಾಯಾದಾಗ ಬಿಕ್ಕಿ ಫಲಬಿಟ್ಟಾಗ ।
ನಾ ಗಂಡು ಮಗನ ಹಡೆದಾಗ । ಭಾವಯ್ಯ ।
ಆಗ ಪಾಲೀಗೆ ಬರುತೀನಿ ॥

ಪಾಲೀಗೆ ಬಂದರೆ ನಾಲೀಗಿ ಸೀಳಿಸುವೆ ।
ನೋಡೋ ಕಣ್ಣುಗಳ ಇರಿಸುವೆ । ಎಲೆ ಹೆಣ್ಣೆ ।
ಪಾಲು ನಿನಗ್ಹ್ಯಾಂಗೆ ಸಲುವವೆ ॥

## ಪ್ರಾರ್ಥನೆ

ಮಕ್ಕಳ ಕುಡು ಶಿವನೆ ಮತ್ತೊಂದು ನಾ ಒಲ್ಲೆ ।
ಹತ್ತುಮಂದ್ಯಾಗ ಹರುನೀರ । ತರುವಂಥ ।
ಮುತ್ತೈದಿತನವ ಕೊಡು ಶಿವನೆ ॥

ಮಕ್ಕಳು ಮನಿತುಂಬ ಕಷ್ಟಕ ಒಬ್ಬಳು ।
ಭತ್ತ್ಕೊಡು ಶಿವನೆ ಅನುಗಾಲ । ಮಕ್ಕಳಿಗೆ ।
ನುಚ್ಚಂಬಲಿ ಮಾಡಿ ಸಲುವೇನ ॥

ಮರ್ತ್ಯಕ ಹುಟ್ಟಿ ಬಂದು ಶರ್ತಮಾಡಿದ ಶಿವಗ ।
ವ್ಯರ್ಥಮಾಡಬ್ಯಾಡ ನನ ಜನ್ಮ । ಮಲ್ಲಯ್ಯ ।
ಶರ್ತ ಮಾಡೀದ ನಿನಸೇವೆ ॥

ಬಡತನ ನನಗಿರಲಿ ಭಾಳ ಮಕ್ಕಳಿರಲಿ ।
ಮ್ಯಾಗ ಗುರುವಿನ ದಯವಿರಲಿ । ನನ ಗುರುವೆ ।
ಬಡತನದ ಚಿಂತಿ ನಿನಗಿರಲಿ ॥

ಅಂಗಯ್ಯ ಒಳಗೀನ ಲಿಂಗ ಮೂರುತಿ ಸ್ವಾಮಿ ।
ಮಂಗಳಾರೂತಿ ನಾ ಬೆಳಗಿ । ಬೇಡುವೆನು ।
ಮಾರಾಯರ ಮುಂದ ಮರಣವ ॥

ಕೂಡಲ ಸಂಗಯ್ಯ ಕುಡು ನನಗ ಮಕ್ಕಳ ।
ನನಗಲ್ಲ ನನ್ನ ಗೆಳದೀಗಿ । ತಂಗೆಮ್ಮಗ ।
ಕುಡುಗಾಲಗೆಜ್ಜಿ ಕೊಮರಾಗ ॥

ಬಸವಣ್ಣ ಹುಟ್ಟಲಿ ಹೊಸಪ್ಯಾಟಿ ಕಟ್ಟಲಿ ।
ರಸಬಾಳಿ ಕಬ್ಬು ಚಿಗಿಯಾಲಿ । ಪಟ್ಟದಕಲ್ಲ ।
ಬಸವಣ್ಣನ ತೇರ ಎಳಿಯಾಲಿ ॥

ಹರಗೀದ ಹೊಲದಾಗ ಮರುಗ ಎತ್ತವಳ್ಯಾರೇ ।
ಹರಳ ಹಚ್ಚಿದ ವಾಲೆ ಕಿವಿಯೊಳು । ದೇವೆವ್ವ ।
ನಿತ್ಯ ನಮ್ಮ ಮ್ಯಾಲ ದಯವಿರಲೇ ॥

ಬಿತ್ತೀದ ಗದ್ಯಾಗ ಪುಷ್ಪ ಎತ್ತವಳ್ಯಾರೇ ।
ಮುತ್ತಾಕಿದ್ವಾಲೆ ಕಿವಿಯೋಳೆ । ದೇವೆಮ್ಮ ।
ನಿತ್ಯ ನಮ್ಮ ಮ್ಯಾಲೆ ದಯವಿರಲೇ ॥

ಹಗಲೆಲ್ಲ ಕೊಯ್ದೇನ ಮುಗಿಲು ಚಂದದ ಹೂವ ।
ಇರುಳೆಲ್ಲ ದಂಡೆ ಹೆಣೆದೇನೆ । ಕಾಳವ್ವ ।
ಕರೆಯೊ ಈರಣ್ಣನ ಕೊರಳೀಗೆ ॥

ಊರಾಗ ತಿರುಗೋಳೆ ಹೂವಿನ ನೆರಿಗ್ಯೋಳೆ ।
ಜಾಲ ಹೂವಿನ ಜಡಿಯೋಳೆ । ಅಂತರಗಟ್ಟಿ ।
ನಿತ್ಯ ನಮ್ಮ ಮ್ಯಾಲ ದಯವಿರಲೇ ॥

ಉಂಗುರದ ಕಾಲ ಊರುತ ಜಾರುತ ।
ಬಂಗರದ ನಡುವ ಬಳಕುತ । ಲಕ್ಕವ್ವ ।
ಬಂದಳೆ ಬಳಿಯ ಹಸನೋಡಿ ॥

ಬಾಗಿಲು ಚಿಕ್ಕದು ಬಗ್ಗಿ ಬಾರೆ ಲಕ್ಕವ್ವ ।
ಭಾಗ್ಯವುಳ್ಳೋಳು ನಿನ ಮಗ । ಲಕ್ಕವ್ವ ।
ಬಾಗಿಲಿಗೆ ಮುತ್ತು ಬಿಗಿಸ್ಯಾನೇ ॥

ಕಲ್ಲ ಹೂಗಿಡ ನೆನೆದವು ಕಲ್ಯಾಣದಯ್ಯನ ।
ಬಿಲ್ಲು ಬಾಣದ ಬಿದಿರೆಯ । ರಂಗಯ್ಯನ ।
ಸೊಲ್ಲು ಸೊಲ್ಲಿಗೆ ನೆನೆದೇವು ॥

ಮಾಳೀಗೆ ಮ್ಯಾಗೀನ ಸಾಲಂಚಿನ ಗೆರಸಿಯ ।
ತಾಯವ್ವ ತೆಗೆದಿಡೆ ನಡುಮನೆಗೆ । ನಾವಿಬ್ಬರು ।
ಮುಕ್ಕಣ್ಣೀಶ್ವರನ ನೆನೆದೇವು ॥

ಬಿದಿರೆ ಬೆಟ್ಟದ ಮೇಲೆ ಚದುರರಾಗಿ ಕಲ್ಲು ।
ಮದನಾರಿನೆಂಬೊ ಹಿಡಿಗೊಟ । ಹಿಡುಕೊಂಡು ।
ಶಿವನ ಪಾಡ್ಯಾಳೆ ಸಿರಿಗೌರಿ ॥

## ಪರ್ಯಾಯ ನೀತಿ

ಕಾಗೀಗಿ ಕಣ್ಣಿಟ್ಟ ಕರಿಯ ಹುಬ್ಬಿನ ಜಾಣ ।
ಮಾವೀನ ಹಣ್ಣು ಮನಿಯಾಗ । ಇಟಗೊಂಡು ।
ನೀರಲಕ್ಯಾಕ ನೆದರಿಟ್ಟಾ ॥

ಹಾಡೀಗಿ ಹಾಡಿಲ್ಲ ಏಡೀಗಿ ತಲೆಯಿಲ್ಲ ।
ಮೋಡ ಬಂದಲ್ಲಿ ಬಿಸಲಿಲ್ಲ । ಹೆಣ್ಣೀಗಿ ।
ಓಡಿ ಹೋದಲ್ಲಿ ಸುಖವಿಲ್ಲ ॥

ಹೆಣ್ಣು ಹಡೆದವ್ವನ ಹೆಮ್ಮೀನು ದೊಡ್ಡದ ।
ಹಣ್ಣು ಬಂದಾವ ತಿನಬಾರ । ಹೆಣ್ಣೀನ ।
ಹರಲಿ ಬಂದಾವ ಹೊರಬಾರ ॥

ಕಪ್ಪು ಹೆಂಡತಿಯಂತ ಕರಕರಿ ಮಾಡಬ್ಯಾಡ ।
ನೀರಲದ ಹಣ್ಣು ಬಲು ಕಪ್ಪು । ಇದ್ದರು ।
ತಿಂದು ನೋಡಿದರೆ ರುಚಿ ಭಾಳ ॥

ಕೆಂಪು ಹೆಂಡತಿಯೆಂದು ಸಂತೋಷ ಪಡಬ್ಯಾಡ ।
ಅತ್ತೀಯ ಹಣ್ಣು ಅತಿ ಕೆಂಪು । ಇದ್ದರು ।
ಒಡೆದು ನೋಡಿದರ ಹುಳ ಭಾಳ ॥

ಮದ್ಯಾಣ ಮಳಿ ಬಂದು ಉದುರ್ಯಾವ ಮಗಿಮಾವ ।
ಗೆದ್ದೆನೆನಬ್ಯಾಡ ಪತಿವರತಿ । ಸೀತಮ್ಮ ।
ಸಿಕ್ಯಾಳು ರಾವಣನ ಬಲಿಯಾಗ ॥

ಒಳ್ಳೇದ ಒಳಗಿಟ್ಟು ಗೊಳ್ಳು ದಾನವ ಮಾಡಿ ।
ಕುಳ್ಳೀಯ ಮನಿಗಿ ತಲೆಗೊಟ್ಟು । ಹೋಗಾಗ ।
ಉಳ್ಳಿಲ್ಲ ದಾನ ಕೊಡಲಿಲ್ಲ ।

ಚಿಂತಿ ಮಾಡುವರೇನ ಅಂತರಿಲ್ಲದ ಗಂಗಾ ।
ಚಿಂತ್ಯಾಗ ಖಾಯು ಇಳಿತರ । ಮರ್ತ್ಯದಾಗ ।
ಸಂತೋಷದಿಂದ್ಯಾರು ಇರುವರ ॥

ಚೆಲುವಿ ಚೆಲುವಿಯೆಂತ ಅತಿ ಬಾಯಿ ಬಿಡಬ್ಯಾಡ ।
ಚೆಲುವಿದ್ದರೇನು ಗುಣವಿಲ್ಲ । ಕೊಳೆನೀರ ।
ತಿಳಿಯಿದ್ದರೇನು ರುಚಿಯಿಲ್ಲ ॥

ಒಡವಿ ಆಡಿದ ಮಾತು ನುಡಿನುಡಿಗೆ ಬ್ಯಾಸರ ।
ಒಡವಿ ಇಟ್ಟವ್ವ ಒನಒದನು । ಹೇಳಿದರ ।
ನುಡಿಗಿ ಬಾಯಿ ಬಿಡತಾರ ॥

ಬೈದಂಥ ಬೈಗಳು ಬೆನ್ಹತ್ತಿ ಬಾರವ ।
ಬೈದವ್ವ ಕೇಳ ನನ ಮಾತ । ಬೈಗೂಳ ।
ಮಲ್ಲಿಗ್ಹೂ ಮಾಡಿ ಮುಡಿಹೋಗ ॥

ಸಾವಿರ ಕೊಟ್ಟರು ಸವತೀಯ ಮನಿ ಬ್ಯಾಡ ।
ಸಾವಿರದ ಮ್ಯಾಲ ಐನೂರು । ಕೊಟ್ಟರು ।
ಮಲಮಕ್ಕಳಿರುವ ಮನಿ ಬ್ಯಾಡ ॥

ಕಿರಕಸಾಲೀ ಗಿಡವು ನೆಲಕ ಹಬ್ಬಿದರೇನ ।
ಕರಕರಿ ಗಂಡನ ಮದಿವ್ಯಾಗಿ । ಆ ಬಾಲಿ ।
ಎರಕೊಂಡ ಮುಡಿಯ ಬಿಚ್ಯಾಳ ॥

ಮದ್ದಗುಣಕಿ ಗಿಡಾ ಉದ್ದ ಬೆಳೆದರೇನ ।
ಮುದುಕ ಗಂಡನ ಮದುವ್ಯಾಗಿ । ಆ ಬಾಲಿ ।
ಇದ್ದ ಭಂಗಾರ ಇಡವಳ್ಳ ॥

ಹೇರಬ್ಯಾಳಿ ಒಯ್ದು ಕೆಸರ ಕಲಿಸೀದಂಗ ।
ಹಸುಮಗಳನೊಯ್ದು ಮುದುಕಾಗ । ಕೊಟ್ಟರ ।
ದುಸ್ಥಾನದವರು ತವರವರು ॥

ತನ್ನ ಬಾಯಿಲೆ ತಾನು ಗರತೇಂದರ ಗರತೆಲ್ಲ ।
ಹಿಚ್ಚನೀರುಣ ಒದನೀಯ । ಕಾಯೀಗಿ ।
ಹಚ್ಚಗಿದ್ದರ ಬದಿ ಹುಳುಕ ॥

ಹುಣಚೀಯ ಎಲಿಗೋಳು ಎಣಿಸಿ ನೋಡಿದರೇನ ।
ಮನಸೀನ ಹೆಣ್ಣು ಕೈ ಮೀರಿ । ಹೋದರ ।
ಸನಸೀದರ್‍ಯಾಂಗ ದೊರೆತಾಳ ॥

ವರಗೇಡಿ ಒಗತನಕ ಕುಡುಬ್ಯಾಡ ಹಡೆದವ್ವ ।
ವರ ನೋಡ ವರನ ಗುಣ ನೋಡ । ಮನಿಯಾನ ।
ಸಾಸಿಕಾಳಷ್ಟು ರಿಣ ನೋಡ ॥

ಬಂಗಾರ ಬಳಿಯಿಟ್ಟು ಬೈಬ್ಯಾಡ ಬಡವರಿಗೆ ।
ಬಂಗಾರ ನಿನಗ ಸ್ಥಿರವಲ್ಲ । ಮದ್ಯಾಣ ।
ಬಿಸಿಲು ಹೊಳ್ಳುವದು ತಡವಲ್ಲ ॥

ಹಾಸೀಗಿ ಮಾಡಿರಲಿ ಕೂಸಲ್ಲಿ ಮಲಗಿರಲಿ ।
ಸಂಪಿಗ್ಹೂವಿರಲಿ ಬನದಾಗ । ಹಡೆದವ್ವ ।
ಮಾತಿರಲಿ ನಿನ್ನ ಮನದಾಗ ॥

ಗಂಗಿ ಹರಿವುದ ಕಂಡು ಲಿಂಗಯ್ಯ ಬೆರಗಾದ ।
ಭಂಗಾರ ಬಸವ ನಸುನಕ್ಕ । ಕೇಳ್ಯಾನ ।
ಹೆಂಗಸರಿಗ್ಯಾಕ ಧುರಪವು ॥

ಇಬ್ಬರ್ಹೆಂಡರ ನಾದಾ ಏಡೀಯ ಮುಳ್ಳಾದಾ ।
ಕೋಡಗನಾದಾ ಕೊರವಾದಾ । ಬಾಲ್ಯಾರು ।
ಮಾಡಿಟ್ಟ ಸಿಂಬಿ ಆರಿವ್ಯಾದಾ ॥

ಉಡುಕೀಯ ಹೆಂಡೂತಿ ಉಡಿಯಾನ ಲಿಂಗೆಂವಾ ।
ಕಿರಿಬಳ್ಳು ಹಿಡಿದು ಮಡದೀಯ । ಸಂಗಾಟ ।
ಸಿಡಿಸೀಡಿ ಯಾಕೊ ಸಿರಿರಾಯಾ ॥

ಅತ್ತ ಮಕ್ಕಳ ಕೈಗಿ ತುತ್ತೊಟ್ಟಿ ಕೊಡಲಿಲ್ಲ ।
ಮಕ್ಕಳ ಬೇಡಿ ಪಠವುತಕ । ಹೋದರ ।
ಮುಕ್ಕಣ್ಣ ಶಿವನು ನನಗೇನ ॥

ಬಾಗಿ ಬಾರೋ ಶಿವನೆ ಬಾಗೀಲ ಬಡೆದಾವು ।
ಮಗ್ಗೀಲದೆಲವು ಮುರದಾವು । ಜಡಿಯಾನ ।
ಗಂಗಾನ ಪೆಟ್ಟು ತಗಲ್ಯಾವು ॥

ಹೆರವರ್ಹೆಣ್ಣೀಗಾಗಿ ಹೊರಗ ಮಲಗುವ ಜಾಣ
ಗಿಡದ ಮ್ಯಾಲೆರಡು ಗಿಣಿ ಕೂತು । ನುಡಿದಾವ
ಎರವನ್ನೊ ರಾಯ ನಿನ ಜೀವ ॥

ಪರಿಮಳದರಸರು ಪರನಾರಿಗ್ಹೋದರ ।
ಮನಿ ಮಡದಿ ಬಾಯಿ ಬಿಡಬ್ಯಾಡ । ತಾವ್ರಮ್ಮ ।
ಮನ ಹೇಸಿ ಮನೆಗೆ ಬರತಾರ ॥

ನೀರಾಗ ನಿಂತಿರುವ ನೀಲಿ ಪಾವಡದಣ್ಣ ।
ನೀರ ಕೆಟ್ಟಾವು ಬದಿಗಾಗೊ । ಗಂಡುಳ್ಳ ।
ಬಾಲಿ ಕೆಟ್ಟಾಳು ನಿನಸಾಗಿ ॥

ಗಂಧ ಹಚ್ಚಿಕ ಬಲ್ಲಿ ಗಮಕ ಮಾಡಕ ಬಲ್ಲಿ ।
ಗಂಡನ್ಯಾಕೊಲ್ಲಿ ಗಯ್ಯಾಳಿ । ನಿನ ಕೆಲಸ ।
ತಾಸೊತ್ತಿನಾಗ ತೀರ್ಯಾವ ॥

ಮುಗಿಲ ಮ್ಯಾಲಿನ ಚಿಕ್ಕಿ ಹಗಲ ಮೂಡಿದರೇನ ॥
ಅಗಲಿ ಇರುವವರ ಗೊಡಿವ್ಯೇನ । ಮಾಣಿಕ ।
ಹಾವಿನ ಬದಿಲಿದ್ದ ಫಲವೇನ ॥

ಗಂಡು ಹಡದೀನೆಂದು ಗರಿವೀಕಿ ನಿನಗ್ಯಾಕ ।
ಗಂಡೆಂಬ ಪಿಂಡ ಬೆಳೆದರ ।ಅದು ಮುಂದ ।
ಹೆಂಡರಿಚ್ಛಾಗಿ ನಡೆವೂದ ॥

ಚಿತ್ರಮುರಕನ ಬಳ್ಳಿ ಎತ್ತ ಹಬ್ಬಿದರೇನ ।
ಚಿತ್ತ ಬ್ಯಾರವಳ ಒಗೆ ಬ್ಯಾರೆ । ಖಬ್ಬೀನ ।
ಹಿಪ್ಪಿ ಬ್ಯಾರ್ಯದರ ರಸಬ್ಯಾರೆ ॥

ಸೂಳೀಗಿ ಹೋಗುವನ ಸುಲಿದು ಮಟ್ಟೀಕಟ್ಟಿ ।
ಊರ ಹೊರಗವನ ಹೆಡಮುರಿಗಿ । ಕಟ್ಟಿದರ ।
ಸೂಳೆಂಬ ಶಬ್ದ ಬಿಡವಲ್ಲ ॥

ಜಾತ ಮಲ್ಲಿಗಿ ಹೂವ ಜಗ್ಗಿ ಕೊಯ್ಯ್ಯಾವರೇನ ।
ಜಗ್ಗಿದರ ಮುಗ್ಗಿ ಉದುರ್ಯಾವ । ಪರಹೆಣ್ಣ ।
ದಿಟ್ಟೀಸಿ ನೋಡಿ ಫಲವೇನ ॥

ಕರಿಯ ಕಮಲದ ಹುವ್ವ ಕೆರಿಯಾಗರಳಿದರೇನು ।
ತೆರಬಾಯಿ ಬಾಯಿ ತೆರೆದ್ಹಾಂಗ । ಆ ಹುವ್ವ ।
ಕೆರಿಯಾಗರಳಿದರ ಫಲವೇನ ॥

ಬೇಲಿಮ್ಯಾಲಿನ ಹೂವ ಬೆಳ್ಳಗಿದ್ದರ ಛಾಯ ।
ಮಲ್ಲೀಗಿ ಹೂವಿನಂಥ ಮದ್ವಿಗಂಡ । ನ ಬಿಟ್ಟು ।
ಹುಲ್ಲಕೊಯ್ಯುವನ ಹುಡುಕ್ಯಾಳ ॥

## ಸ್ವಷ್ಟ ನೀತಿ

ಅತ್ತೀಯ ಮನಿಯಾಗ ಮುತ್ತಾಗಿ ಇರಬೇಕ ।
ಹೊತ್ತಾಗಿ ನೀಡಿದರ ಉಣಬೇಕ । ತವರವರ ।
ಉತ್ತಮರ ಹೆಸರ ತರಬೇಕ ॥

ತನ್ನಂಗ ನೋಡಿದರ ಭಿನ್ನಿಲ್ಲ ಭೇದಿಲ್ಲ ।
ತನ್ನಂಗ ತನ್ನ ಮಗಳಂಗ । ನೋಡಿದರ ।
ಕಣ್ಣ ಮುಂದಾದ ಕೈಲಾಸ ॥

ಸರದಾರ ಸನ್ನಣ್ಣಾ ಕರೆದು ತಾ ಹೇಳ್ಯಾನ ।
ನೆರೆಹೊರಿಯ ಮನಿಯ ಹೊಗುಬೇಡ । ನನ ತಂಗಿ ।
ಬರಬಾರದ ಮಾತು ಬರತಾವ ॥

ಲೋಕದಾಗೀ ಜೀವ ಜ್ವಾಕ್ಯಾಗೊಂದಿರಬೇಕ ।
ಕಾಕುಬುದ್ಧಿಗಳು ಸ್ಥಿರವಲ್ಲ । ಈ ಜೀವ ।
ನೂಕೀನ ಹರುವ ಜಲದಾಗ ॥

ಮಂದಿಮಕ್ಕಳೊಳಗ ಛಂದಾಗ್ಯೊಂದಿರಬೇಕ ।
ನಂದೀಯ ಶಿವನ ದಯದಿಂದ । ಹೋಗಾಗ ।
ಮಂದಿ ಬಾಯಾಗ ಇರಬೇಕ ॥

ಕಾಚ ಕಪ್ಪುರ ಹೀನ ನೀಚ ನಾಲಿಗೆ ಹೀನ ।
ಆಚಾರ ಹೀನ ಗರತೀಗಿ । ಅಕಿಮುಂದ ।
ದೇಸಾಯಿ ಅಣ್ಣಾ ನಗು ಹೀನ ॥

ಹೆಣ್ಣೀನ ಕಾಯವ ಮಣ್ಣು ಮಾಡಲಿ ಬೇಕ ।
ಸುಣ್ಣದಳ್ಯಾಗಿ ಸುಡಬೇಕ । ಈ ಜಲುಮ ।
ಮಣ್ಣು ಮಾಡಿ ಮರ್ತ್ಯ ಗೆದಿಬೇಕ ॥

ಗಂಡ ಸತ್ತವ್ವಾಗ ರಂಡಮುಂಡೆನಬೇಡ ।
ಕಂದನ ಹಿಡಿದು ತಪಹಾಳ । ಅವಳೀಗಿ ।
ಗಂಗಾದೇವೆಂದು ಕರಿಬೇಕ ॥

ಚಿಂತಿ ಮಾಡಲಿಬ್ಯಾಡ ಛೀ ಹುಚ್ಚಿ ಹಡೆದವ್ವ ।
ಚಿಂತ್ಯಾಗ ಕಾಯ ಇಳಿತರ । ಪಾಂಡವರ ।
ಅಂಥವರಿಗುಂಟು ವನವಾಸ ॥

ಅತ್ತಿಮಾವಾಗಂಜಿ ಸುತ್ತೇಳು ನೆರೆಗಂಜಿ ।
ಮತ್ತನಲ್ಲನ ಧನಿಗಂಜಿ । ನಡೆದರ ।
ಎಂಥ ಉತ್ತಮರ ಮಗಳಂದ ॥

ಹಸುವೀಗಿ ಹಾಲ್ಕೊಟ್ಟು ಶಿಶುವೀಗಿ ಬೆಣ್ಣಿಕೊಟ್ಟು ।
ಬಿಸಲೀಗಿ ನಿಂತವರ ನೆರಳೀಗಿ । ಕರೆದರ ।
ಅಸವಲ್ಲದ ಪುಣ್ಯ ಮಗನೀಗಿ ॥

ಅತ್ತೀಯ ಮನಿಯಾಗ ಹತ್ತೆಂಟು ಬೈದರ ।
ಉತ್ತರ ಬ್ಯಾಡ ನನ ಮಗಳೆ । ನಿಮ್ಮತ್ತಿ ।
ಎಂಥ ಉತ್ತಮರ ಮಗಳಲ್ಲೆ ॥

ಇದ್ದರ ಇರಬೇಕ-ಬುದ್ಧಿವಂತರ ನೆರೆಯ ।
ಖುದ್ದರಗೇಡಿ ಕುಲಗೇಡಿ । ನೆರೆಯಿದ್ದು ।
ಇದ್ದಷ್ಟು ಬುದ್ದಿ ಕಳಕೊಂಡ ॥

ಅಂಜೂರ ಹಣ್ಣೊಂದು ತಂದು ತೂರಲಿಬ್ಯಾಡ ।
ಹೆಂಡರಿಗೆ ಸಲಿಗಿ ಕೊಡಬ್ಯಾಡ । ನನ ತಮ್ಮ ।
ಮುಂದ ನಿನ ಮಾತೆ ನಡಿಯಾವ ॥

ಅಣ್ಣ ತಮ್ಮರ ಹಾಡಿ ಪುಣ್ಯಗಳಿಯಲಿ ಬ್ಯಾಡ ।
ಅಣ್ಣ ಬಸವಯ್ಯನ ಹಾಡವ್ವ । ಹರದಿ ।
ಯಾಕ ಸಾಕಿನ್ನು ಘೋರಾ ॥

ಅಡವಿ ಸೇರಲು ಬೇಡ ಜಡೆಯು ಬೆಳೆಸಲು ಬೇಡ ।
ಮಡದೀಯು ನೀನು ಬಿಡಬೇಡ । ದೃಡದಿಂದ ।
ನಡೆನುಡಿಯಲ್ಲಿ ಕೆಡಬೇಡಾ ॥

ಗುಂಡ ಮಾರಿಯ ಹೆಣ್ಣು ಚೆಂಡು ಹೂವಿನ ಬಣ್ಣ ।
ಕಂಡಕಂಡಲ್ಲಿ ನಗಬ್ಯಾಡ । ಎಲೆ ಮಗಳ ।
ಬರಬಾರದಪವಾದ ಬಂದಾವ ॥

ಅತ್ತೀಮನಿಗ್ಹೋಗುವ ಮುತ್ತ್ಯದಿ ಮಗಳೀಗೆ ।
ಮತ್ತೊಂದ್ಹೇಳೊದು ಮರೆತೇನ । ನನ ಮಗಳ ।
ಅತ್ತಿಗುತ್ತರ ಕೊಡಬ್ಯಾಡ ॥

ಉತ್ತಮರ ಗೆಳೆತನ ಪುತ್ಥಳಿ ಬಂಗಾರ ।
ಮತ್ತ ಹೀನರ ಗೆಳೆತನ । ಮಾಡಿದರ ।
ಹಿತ್ತಾಳಿಗಿಂತ ಬಲು ಹೀನ ॥

ತಾಯವ್ವನ ಬೈಬ್ಯಾಡ ತಿಳಿಗೇಡಿ ನನ ತಮ್ಮ ।
ಭಾಳ ದಿನದಾಕಿ ಹಡೆದವ್ವಗ । ಬೈದರ ।
ಭಾಳ ಮರುಗ್ಯಾಳ ಮನದಾಗ ॥

ಲೋಕದಾಗಿರುತನಕ ಬೇಕಾಗಿ ಇರಬೇಕ ।
ಸಾಕಾಗಿ ಶಿವನ ಸದರೀಗಿ । ಹೋಗುವಾಗ ।
ಎಲ್ಲಾರು ಬರತಾರ ಕಳಿಸಾಕ ॥

ಪೂಜಿ ಮಾಡಿದರೇನ ಪತ್ರಿ ಏರ್ಸಿದರೇನ ।
ಪತಿ ಮೇಲೆ ಭಕ್ತಿ ಇರದಿದ್ರ । ಗೆಳದೆವ್ವ ।
ಮಾದೇವ ಹ್ಯಾಂಗ ಒಲಿದಾನ ॥

ಅತ್ತಿಯು ಮನಿಯಾಗ ಹತ್ತಾರು ಬಯ್ದರ ।
ಉತ್ತರ ಬ್ಯಾಡ ನನ ಮಗಳ । ನಿಮ್ಮತ್ತಿ ।
ಉತ್ತಮರ ಮಗಳೆಂದು ಅನ್ನುವಳ ॥

ಬಡತನ ಬಂದರ ಬಡಿಬ್ಯಾಡ ಬಾಲರನ ।
ಆಡ್ಯಾಡಿ ಬಂದು ತೊಡಿಮ್ಯಾಲ । ಆಡಿದರ ।
ಬಡತನವೆಲ್ಲ ಬಯಲಾಗೆ ॥

ಬಸಿರು ಇರುವೆನೆಂದು ಖುಷಿಯಾದರ ಮನದಾಗ ।
ಹಡೆದೇನೆಂಬೂದು ಹವಣಿಕೆ । ಶಿವರಾಯನ ।
ಕರುಣ ತಪ್ಪಿದರ ಮರಣವ ॥

ದೇವಕಿ ನನ ಮಗಳ ದೇವರ ಪೂಜೆಯ ಮಾಡ ।
ದೇವರ ಕರುಣ ನಿನ ಮ್ಯಾಲ । ಆದರ ।
ದೇವರಂತ ಪತಿಯು ದೊರೆತಾನ ॥

ಕಾರ್‍ಹುಣ್ವಿ ಮರುದಿನ ಅಣ್ಣ ಬ್ಯಾಟಿಗಿ ಹೋದ ।
ಹೆಣ್ಣ ಚಿಗರಿಯ ಕೊಲಬ್ಯಾಡ । ಅಣ್ಣಯ್ಯ ।
ನನಸರಿ ಮಾಡಿ ಬಿಡು ಅದನ ॥

ಸೂಳೆಗೆ ಹೋದವನು ಏನಾದ ಎಂತಾದ ।
ಕಾಡು ನಾಯಾದ ಕಪಿಯಾದ । ಆ ಮುರವ ।
ಸೂಳಿ ಕಾಲಿಗೆ ಕೆರವಾದ ॥

ಮಕ್ಕಳುಂಟೆಂದು ಮರಿಗಳುಂಟೆಂದು ।
ನಚ್ಚಬೇಡ ಮನವೆ ಏನಿಲ್ಲ । ನಿನಗಿಲ್ಲಿ ।
ನಿಚ್ಚ ಪುರಂದರ ವಿಠಲನಿನ್ನು ॥

ಹುಟ್ಟುವಾಗ ತರಲಿಲ್ಲ ಹೋಗುವಾಗ ಒಯ್ಯಲಾರೆ ।
ಸುಟ್ಟು ಸುಟ್ಟು ಸುಣ್ಣದ್ಹರಳಾಯ್ತು । ದೇಹವು ।
ಕಷ್ಟವನು ಬಿಡಿಸೊ ಸೃಷ್ಟಿಗೊಡೆಯ ॥

ಹಾಲು ಇದ್ದಾಗ ಹಬ್ಬವ ಮಾಡವ್ವ ।
ನಾವು ನಾಲ್ವರು ಮನಿಯಾಗ । ಇದ್ದಾಗ ।
ಮಾಡವ್ವ ಮಗನ ಮದುವೆಯ ॥

## ಕೊನೆ

ಕಲ್ಲ ಕೊಟ್ಟವ್ವಗ ಎಲ್ಲ ಭಾಗ್ಯವು ಇರಲಿ ।
ಪಲ್ಲಕ್ಕಿ ಇರಲಿ ಪದವಿರಲಿ । ಹಡೆದವ್ವ ।
ನೆಲ್ಲ ಬಾನಿರುವ ಮನಿಯಿರಲಿ ॥

ಯಾರು ಇಲ್ಲದವರ ಹಾಸ್ಯ ಮಾಡುವರೇನ ।
ಈಶ್ವರನ ದಂಡು ನನ ಬಳಗ । ಹಾತಟಿಗೆ ।
ಸೂರ್ಯ ನಿಮು ಬೆಳಕ ಬೆಳೆದಾವ ॥

ನಮ್ಮ ಬೀಸಿದ ಹಿಟ್ಟು ಸೂತಕ ಆದಾವ ।
ಪಾತಾಳದಾನ ಸಿರಿಗಂಗಿ । ನಾ ಹಾಡಿದರ ।
ಸೂತಕವಿಲ್ಲ ಹೊಲಿಯಿಲ್ಲ ॥

ಆದ ಮುಕ್ಕಿಗಿ ನನ್ನ ಸ್ವಾದರನ ಹಾಡುವೆನು ।
ಸ್ವಾದರನ ತಂಗಿ ಹಡೆದಮ್ಮ । ನಿನ ಹಾಡಿ ।
ಜಾಡೀಸಿ ರಥವ ನಿಲಿಸೇನ ॥

ಆದಾವ ನಮ ಜೋಳ ಉಳಿದಾವ ನಮ ಹಾಡ ।
ಈಗ ಸಾಕವ್ವ ನಿನ ಕಲ್ಲ । ಕೈಯಾನ ॥
ಹಾಕಿದುಂಗುರ ಸವಿದಾವ ॥

ಆದ ಮುಕ್ಕಿಗೆ ಶರಣು ಗೋದಿ ಕಲ್ಲಿಗೆ ಶರಣು ।
ಓನಾಮು ಶಿವಗ ಶಿವ ಶರಣು । ಮಲ್ಲಯ್ಯ ।
ನಿಮ್ಮ ಪಾದಕ ನಮೋ ಶರಣು ॥

ರಾಗಿಯು ಮುಗಿದಾವು ರಾಜಾಣಾ ಹೆಚ್ಚ್ಯಾವು ।
ನಾನ್ಹಿಡಿದ ಕೆಲಸ ಒದಗ್ಯಾವು । ರಾಗೀಕಲ್ಲೇ ।
ನಾ ಕೂಗಿ ಬಿಡುತೀನಿ ಬಲದೋಳಾ ॥

ನಾ ನಿನ್ನ ಸೋಲಿಸಿದೆ ನಾ ನಿನ್ನ ನಿದ್ರೆ ಕೆಡಿಸೀದೆ ।
ನಾ ನಿನ್ನ ನಿದ್ದೆ ಕೆಡಿಸೀದೆ । ರಾಗೀ ಕಲ್ಲೆ ।
ನಾ ತೂಗಿ ಬಿಡುತೀನಿ ಬಲದೋಳಾ ॥

ಕಲ್ಲು ಬಿಡ್ತೀನೆಂದು ಸಿಟ್ಯಾಕೆ ಸರಸತಿಯೆ ।
ಕುಕ್ಕೇಲಿ ರಾಗಿ ಬೆಳೆಯಲ್ಲಿ । ತಕ್ಕೊಂಡು ।
ಮತ್ತೆ ರಾತ್ರೀಗೆ ಬರುತೀನಿ ॥

ಕಲ್ಲು ಬಿಡ್ತೀನೆಂದು ಎಲ್ಲಾರೂ ಕೇಳೀರಿ ।
ಕಲ್ಲು ಕಾವೇರೀ ಕಪನೀಯು । ನಂಜಯ್ಯನ ।
ಕಲ್ಬಿಟ್ಟು ಕೈಯಾ ಮುಗಿದೇನು ॥

೬

# ಬಳಕೆಯ ಮಾತಿನ ಪದಪ್ರಯೋಗಗಳು

ಹಾಂಗ, ಹೀಂಗ, ಹ್ಯಾಂಗ ಇತ್ಯಾದಿ = ಹಾಗೆ, ಹೀಗೆ, ಹೇಗೆ.

ಬಿಡಬ್ಯಾಡ, ಮಾಡಬ್ಯಾಡ, ಕೊಡುಬ್ಯಾಡ ಇ. = ಬಿಡಬೇಡ, ಮಾಡಬೇಡ,
ಕೊಡಬೇಡ.

ಅಟ್ಟು, ಇಟ್ಟು, ಎಟ್ಟು ಇ. = ಅಷ್ಟು, ಇಷ್ಟು, ಎಷ್ಟು.

ಆಯ್ತು, ಹೋಯ್ತು, ಇ. = ಆಯಿತು, ಹೋಯಿತು.

ಆಗಾಗ, ಹೋಗಾಗ, ಮಾಡಾಗ ಇ. = ಆಗುವಾಗ, ಹೋಗುವಾಗ,
ಮಾಡುವಾಗ.

ಛೆಳ್ಳಾನ. ಬೆಳ್ಳಾನ ಇ. ಶೆಳ್ಳನ್ನ, ಬೆಳ್ಳನ್ನ.

ಸುದ್ದ, ಶಬುದ ಇ. = ಶುದ್ಧ, ಶಬ್ದ.

ಇಟ್ಹಾಂಗ, ಕೊಟ್ಹಾಂಗ, ಇ. = ಇಟ್ಟಹಾಗೆ, ಕೊಟ್ಟಹಾಗೆ.

ಬಂದ, ಹೋದ, ಅಂದ ಇ. = ಬಂದನು, ಹೋದನು, ಅಂದನು.

ಖಳುವು. ಭಾಳ ಇ. = ಕಳುಹು, ಬಹಳ.

ನೋಡಟಿಗೆ, ಮಾಡಟಿಗೆ ಇ. = ನೋಡುವಷ್ಟರಲ್ಲಿ, ಮಾಡುವಷ್ಟರಲ್ಲಿ.

ನೋಡಂಥ, ಮಾಡಂಥ, ಕರಗಂಥ ಇ. = ನೋಡುವಂಥ, ಮಾಡುವಂಥ,
ಕರಗುವಂಥ.

ಬರತ್ಯೆಂದು, ಹೋಗತ್ಯೆಂದು ಇ. = ಬರುತ್ತೀ ಎಂದು, ಹೋಗುತ್ತೀ ಎಂದು.

ಹೋಗಲಕ, ಮಾಡಲಕ, ಹೋಗಲಾಕ, ಮಾಡಲಾಕ ಇ. = ಹೋಗಲಿಕ್ಕೆ,
ಮಾಡಲಿಕ್ಕೆ.

ಕೊಟ್ಟೇನ, ಬಿಟ್ಟೇನ ಇ. = ಕೊಟ್ಟಿರುವೆನು, ಬಿಟ್ಟಿರುವೆನು.

ಹೊರಿಯಾಕ, ತೆಳಿಯಾಕ, ಕೆಳಿಯಾಕ ಇ. = ಹೊರಗೆ, ತೆಳಗೆ, ಕೆಳಗೆ

ಹ್ಯಾಂಗಾರೆ = ಹೇಗಾದರೂ.

ಬಾತೀಗಿ ಬಾರದ್ದು = ಕೆಲಸಕ್ಕೆ ಬಾರದ್ದು.

ಹಾಳ, ಹಾನ, ಹಾರ ಇ. = ಇಹಳು, ಇಹನು, ಇದ್ದಾರೆ.

# ಶಬ್ದಕೋಶ

ಅಬ್ಬರಣೆ = ಆರ್ಭಟೆ
ಅರಚು = ಅಳುವ
ಅವಚಾರಿ = ಅವಿಚಾರಿ
ಅಸಲ = ಚೊಕ್ಕ
ಅಸವಲ್ಲದ = ಬಹಳ
ಆಳವು = ಅಳತೆ
ಅಂದಾಲ = ಪಲ್ಲಕ್ಕಿ
ಆಕಾಡಿ = ಆ ಕಡೆ
ಆರ್ಯಾಣ = ಅರಣ್ಯ
ಇಗ್ಗರಿ = ಕಾಟ
ಇಚ್ಚುಳ್ಳ = ಇಚ್ಛೆಯುಳ್ಳ
ಇಸವಾಸ ವಿಶ್ವಾಸ
ಉದಿಯಾದ = ಉದಯವಾದ
ಉಮದಿ = ಒಂದು ಊರ ಹೆಸರು
ಉಸ್ವಾರಿ = ಸಾವರಣೆ
ಏರೀಸಿದಡಕಲ = ಒಂದರ ಮೇಲೊಂದು ಏರಿಸಿದ ಗಡಿಗೆಯ ಸಾಲು
ಏಳಲ = ಏಡಿಸುವಿಕೆ
ಏರುಕಟ್ಟು = ಒಡ್ಡುಹಾಕು
ಐಭೋಗ = ಐಶ್ವರ್ಯ
ಒಗೆತನ = ಅನುರಾಗ (ನಡವಳಿಕೆ)
ಒಂಕಿ = ಹೆಣ್ಣುಮಕ್ಕಳು ರಟ್ಟೆಯಲ್ಲಿ ಇಟ್ಟುಕೊಳ್ಳು ಒಂದು ಆಭರಣ
ಕಗ್ಗ = ಕಸುಕು
ಕಡಗ = ಒಂದು ಆಭರಣ
ಕಬ್ಬೆಲ್ಲ = ಗಣಪತಿ
ಕರಲ = ಒಂದು ತರದ ಕಗ್ಗಭೂಮಿ
ಕಾಸೆ = ಸೊಂಟದಿಂದ ಮೊಣಕಾಲ ವರೆಗಿನ ಉಡಿಗೆ
ಕೆಂದು = ಕೆಂಪು ಆಕಳು
ಕೊಡವಿ = ಕನ್ಯಾ (ಕೊಡುಗೆ)
ಕೋಮಲ್ಲಿ = ಕೋಮಲೆ
ಖುದ್ದರಗೇಡಿ = ಕ್ಷುದ್ರಗೇಡಿ
ಗಕ್ಕನೆ = ಬೇಗನೆ
ಗಜಭೀಮ = ಗದೆಯುಳ್ಳ ಭೀಮ
ಗಲ್ಲೀಪ = ಎತ್ತಿನಂಗಿ, ಮುಸಲ್ಮಾನ ದೇವರಮೇಲೆ ಕಟ್ಟುವ ಅರಿವೆ
ಗಿರಿಮಲ್ಲ = ಶ್ರೀಶೈಲ ಮಲ್ಲಿಕಾರ್ಜುನ
ಗಿಂಡಿ = ಸಣ್ಣ ತಂಬಿಗೆ
ಗುಜ್ಜಿ = ಚಿಕ್ಕವಳು
ಘಳಿಗಿ = ಸೀರೆ (ಮಡಿಕೆ)
ಘೊಲ್ಲಿ = ಗೊಂಚಲು
ಚುಂಗು = ತುದಿ
ಚಿತ್ತಾಕ = ಒಂದು ಆಭರಣ (ಚಿಂತಾಕ)

ಜಿಪ್ಪಾಟಿ = ದನಗಳು ತಿಂದು ಉಳಿಸಿದ ಸೊಪ್ಪು
ಚಿಲಕಿ = ಒಳಮಾಳಿಗೆಯೊಳಗೆ ಹಾಕಿದ ಸಣ್ಣ ಸಣ್ಣ ಕಟ್ಟಿಗೆಯ ತುಣುಕುಗಳು
ಜೆಂಡಿ = ತುದಿ
ಜಕಾತಿ = ಸುಂಕದ ಕಟ್ಟೆ
ಜಲುಮ = ಜನ್ಮ
ಜಳ್ಳಾನೆ = ಜುಳುಜುಳನೆ
ಜಲ್ಲಿಜಲ್ಲನೆ = ಬಳಬಳನೆ
ಜಾನ = ಧ್ಯಾನ (ನೆನಹು)
ಜಾಚೇಲಿ = ಹೆಣ್ಣುಮಕ್ಕಳು ಬಳಸುವ ಹಲ್ಲುಪುಡಿ
ಜುಂಬ = ದಟ್ಟಿ
ಟಿಕ್ಕಿ = ಹೆಣ್ಣುಮಕ್ಕಳ ಕೊರಳೊಳಗಿನ ಆಭರಣ
ತಸವು = ತಂಪು
ತಾಬೂತಿ = ರೇಶಿಮೆಯ ಒಂದು ತೆರದ ಅರಿವೆ
ತಾರೀಪ = ವರ್ಣನೆ
ತಾವೂರಿಬಾವೂರಿ = ಕಳವಳ, ಅಸ್ವಾಸ್ಥ್ಯ
ತೆವರು = ದಿಸ್ಸೆ
ತಿಂದೋಡಿ = ತಿನ್ನಬಡಕಿ (ಯಾವಾಗಲೂ ತಿನ್ನುವವಳು)
ತೊಂಡಲು = ದೊಡ್ಡ
ಥಂಬ = ಒಂದು ಊರು
ಥರವಲ್ಲ = ಯೋಗ್ಯವಲ್ಲ
ದರಕಾರ = ಪರಿವೆ; ಎಗ್ಗು
ದಟ್ಟಿ = ಸೀರೆ
ದುಖ = ದುಃಖ
ದುರುಪ = ದರ್ಪ
ದುಸ್ತರ = ಕಠಿನ
ದುಸ್ಮಾನ = ಕೆಟ್ಟ
ದೊಡ್ಡಿ = ಹಿತ್ತಲು
ದ್ವಾರೆ = ಹೆಣ್ಣುಮಕ್ಕಳ ಕೈಯ ಆಭರಣ
ಧರಿಧೂಳ = ಗುಡ್ಡದ ಓರೆಯಲ್ಲಿ ರುವ ಒಂದು ದೇವತೆ
ಧಿಮುಕ = ಏಟು (ಚುಕ್ಕು)
ಧೀರಿಲ್ಲ = ಧೈರ್ಯವಿಲ್ಲ
ನಾಗಸೊರ = ನಾಗಸ್ವರ ಎಂಬ ವಾದ್ಯ
ನಿಚ್ಚ = ನಿತ್ಯ
ನಿರಬಯಲ = ನಿರ್ಬಯಲು
ನಿಲಿ = ನಿರಿಗೆ
ನೆಸದಾನ = ಒಡಮೂಡಿರುವನು
ನೆಲಗಂಚ = ನೆಲಗಚ್ಚು
ನಿಂಗಕ = ಲಿಂಗಕ್ಕೆ
ನಿಂಬರಗಿ = ಒಂದು ಊರು
ಪದಮವ್ವ = ಜೈನರು ಪೂಜಿಸುವ ಯಕ್ಷಿ
ಪರಸಂಗ = ಪ್ರಸಂಗ
ಪಾರೀಸನಾಥ = ತೀರ್ಥಂಕರ
ಪಾಪಾಸ = ಕಾಲುಮರೆ

ಪಾವುಡ = ರುಮಾಲು

ಪಿಲ್ಲಿ = ಹೆಣ್ಣುಮಕ್ಕಳು ಕಾಲು ಬೆರಳಿನಲ್ಲಿ ಹಾಕಿಕೊಳ್ಳುವ ಆಭರಣ

ಬಬಲಾದಿ = ಒಂದು ಊರು

ಬಾಳಕ = ಸೊಪ್ಪು, ಹಣ್ಣು ಮೊದಲಾದ ಒಣಗಿದ ಪದಾರ್ಥವು

ಬಿಂಗರದ = ತೆಳುವಾದ

ಬೀಡಿಕೆ = ವಸತಿ

ಬೂದ = ರಾಸಿಯೊಳಗಿನ ಒಬ್ಬ ದೇವತೆ

ಬೆನವಣ್ಣ = ಗಣಪತಿ

ಬೋರ್‍ಯಾಡತಾವ = ಹೆಚ್ಚಾಗಿ ಹರಿಯುವವು

ಬಂಧಾನ = ಕಪ್ಪ

ಭಾಗಾದಿ = ರಕ್ತಸಂಬಂಧವಿದ್ದು ವೈರಿಯಾದವನು

ಭಾರಿ = ದೊಡ್ಡ

ಭಂತ್ನಾಳ = ಒಂದು ಊರು

ಭಿಂಗ್ಯಾರು = ಭೃಂಗಿಯರು

ಮಗಡಾ = ಮಕಡಾ

ಮನಬಾರ = ಮನಸಿಗೆ ಬರು

ಮಲಕಾರಿ = ಮಲ್ಲಿಕಾರ್ಜುನ

ಮಸಳಿ = ಒಂದು ಊರು

ಮರ್ತ್ಯದಾಗ = ಭೂಮಿಯ ಮೇಲೆ

ಮಾರಿ = ಮೋರೆ

ಮಂಜ್ಯಾನ = ಕಟ್ಬಾರಣ್ಯ

ಮೈದರಸ = ಮೈದುನ ದೊರೆ

ಮೊಗದಾಡು = ಚೆಲ್ಲಾಡು

ಯಾಯಾಳಿ = ಯಾವ ವೇಳೆ

ರಬಕವಿ = ಒಂದು ಊರ ಹೆಸರು

ರಥ = ಬೀಸುವ ಕಲ್ಲು

ರುಳಿ = ಹೆಣ್ಣು ಮಕ್ಕಳ ಕಾಲೊಳಗಿನ ಆಭರಣ

ರಂಜಣಗಿ = ನೀರು ತುಂಬುವ ಮಣ್ಣಿನ ದೊಡ್ಡ ಗಡಿಗೆ

ರಾಂಭಾಣ = ಆಯುಧ

ಲಗ್ಗಿ = ಚೆಂಡಿನ ಆಟ

ಲ್ಯಾವಳ = ಕೊರಳೊಳಗಿನ ಆಭರಣ

ವತ್ತಲ = ನೀರುಕಾಸುವ ಭಾಂಡೆ

ವಂಗರುವಳ್ಳಿ = ಒಂದು ಹಳ್ಳಿ

ವಾರಿಗಿ = ಜೋಡಿ

ವಾಲಿ = ಓಲೆ ಎಂಬ ಆಭರಣ

ವಾಸ್ಯಾಡಬ್ಯಾಡ = ವಾದಿಸಬೇಡ

ಸಡಿಲ್ಯಾವ = ಸಡಿಲು ಆದಾವು

ಸದಿ = ಸೊಪ್ಪೆ

ಸನುಮಾನಿಕೆ = ಸಮಾಧಾನ

ಸರಗಿ = ಸರಿಗೆ ಎಂಬ ಆಭರಣ

ಸರುವು = ಸರ್ಪ

ಸಂಕದೇವ = ರಾಸಿಯೊಳಗಿನ ಒಬ್ಬ ದೇವತೆ

ಸಮರಂತೆ = ಕುಶಲಗಾರ್ತಿ

ಸಾಲುಟಗಿ = ಒಂದು ಊರು
ಸಾಮೆ = ಸಾಂವಕ್ಕಿ
ಸುರಪುರ = ಒಂದು ಊರು
ಸುಂಗರ = ಸಿಂಗಾರ
ಸೆಲ್ಲೆ = ಮೈಮೇಲೆ ಹೊದ್ದು ಕೊಳ್ಳುವ ಪಂಜಿ
ಸೊಗಲ = ಒಂದು ಊರು
ಸೊಲ್ಲಾಪುರ = ಒಂದು ಊರು
ಸಂಗಾಟ = ಜೊತೆಗೆ
ಸಂಬಸಲಾರೆ = ಸಂಬಾಳಿಸಲಾರೆ
ಸಂವರಾಜ್ಯ = ಅರ್ಧ ರಾಜ್ಯ
ಶರ್ತ = ಬಹಳ

ಹಡಿಲಾಕ = ಹಡೆಯುವುದಕ್ಕೆ
ಹರದಿ = ವರ್ತಕರ ಹೆಣ್ಣುಮಗಳು (ಬಳೆಗಾರ್ತಿ)
ಹರಲಿ = ನಿಂದೆ
ಹಲಸಂಗಿ ಒಂದು ಊರು
ಹಲ್ಲುಸುಲಿ = ಹಲ್ಲು ತಿಕ್ಕು
ಹಟ್ಟಿ = ಮೇವಿನ ದಡಿ
ಹಂಡಿ = ಹಂಡಾಕಳು
ಹಾಸಿ = ಹಾಸ್ಯ
ಹುಡದಿ = ಗೊಂದಲ
ಹೆಡಗಿ = ಬುಟ್ಟಿ

ಕನ್ನಡದಲ್ಲಿ ಲೇಖಕ – ಪ್ರಕಾಶಕ – ಓದುಗರ ನಡುವೆ ಗಾಢ ಸಂಬಂಧವನ್ನು ಏರ್ಪಡಿಸುತ್ತಾ, ಶ್ರೀಸಾಮಾನ್ಯರಲ್ಲಿ ಉತ್ತಮ ವಾಚನಾಭಿರುಚಿಯನ್ನು ಹಾಗೂ ಪುಸ್ತಕ ಪ್ರೀತಿಯನ್ನು ಮೂಡಿಸುತ್ತಾ, ರಾಜ್ಯಾದ್ಯಂತ ಓದುಗರಿಗೆ ಒಳ್ಳೆಯ ಪುಸ್ತಕಗಳು ಸುಲಭ ಬೆಲೆಯಲ್ಲಿ ದೊರೆಯುವಂಥ ಸ್ಥಾಯೀ ವ್ಯವಸ್ಥೆಯೊಂದನ್ನು ರೂಪಿಸಿ, ಕನ್ನಡ ಪುಸ್ತಕೋದ್ಯಮವನ್ನು ಜನಪರವಾಗಿ ಮತ್ತು ದೃಢವಾಗಿ ಬೆಳೆಸುವ ಉದ್ದೇಶದಿಂದ 'ಕನ್ನಡ ಪುಸ್ತಕ ಪ್ರಾಧಿಕಾರ' ಎಂಬ ದೀರ್ಘಕಾಲಿಕ ಯೋಜನೆಯೊಂದನ್ನು ಸರ್ಕಾರವು ರೂಪಿಸಲು ಯತ್ನಿಸುತ್ತಿದೆ. ಈ ನಿಟ್ಟಿನಲ್ಲಿ 1989–90ರ ಸಾಲಿನಲ್ಲಿ ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯವು ಕೈಗೊಂಡಿರುವ 'ಜನಪ್ರಿಯ ಪುಸ್ತಕ ಮಾಲೆ' ಒಂದು ಮೊದಲ ಹೆಜ್ಜೆ. ಇಂದಿನ ಈ ಪುಸ್ತಕ ಪ್ರಕಟಣೆ ಯೋಜನೆಯು ಮುಂದೆ 'ಪುಸ್ತಕ ಪ್ರಾಧಿಕಾರ'ವಾಗಿ ಬೆಳೆದು, ಒಂದು ಸ್ವಾಯತ್ತ ಸಂಸ್ಥೆಯಾಗಿ ರೂಪುಗೊಳ್ಳಲೆಂಬುದು ಸದ್ಯದ ಆಶಯ.